# ಮಾನಸಿ

ತಿಂಗಳ ಪತ್ರಿಕೆ

ಜನವರಿ : 1998

- ಈಶಾನ್ಯ ಭಾರತದ ಸ್ಥಳೀಯ ಮಹಿಳೆಯರ ಜಂಟಿ ವೇದಿಕೆ
- ಅವರ ಪರಾಕ್ರಮಕ್ಕೆ ನಮ್ಮ ಮನಸಂಕಲ್ಪವೇ ಉತ್ತರ
- ನನ್ನ ಹೃದಯದೊಳಗಿನ ಹಿಂದುಳಿದ ಜಾತಿಗಳ ಪರವಾಗಿ ಉರಿಯುವ ಜ್ವಾಲೆ ನನ್ನ ಚಿತೆಯೊಂದಿಗೆ ತಣ್ಣಗಾಗುವುದು!

# ಮಾನಸ

ತಿಂಗಳ ಪತ್ರಿಕೆ

ಸಂಪುಟ : 13 ಸಂಚಿಕೆ : 1

ಜನವರಿ : 1998





ವಿಳಾಸ :

"ಮಾನಸ" ತಿಂಗಳ ಪತ್ರಿಕೆ

ಪಂಚಾಯಿತಿ ರಸ್ತೆ

ಕಾಡುಗೋಡಿ ಪೋಸ್ಟ್

ಬೆಂಗಳೂರು - 560 067



ಸೂಚನೆ : ಬಿಡಿ ಪ್ರತಿ **3-00** ರೂ.

ವಾರ್ಷಿಕ ಚಂದಾ **40-00** ರೂ.

ಒಂದು ವಿಶೇಷ ಸಂಚಿಕೆಯೊಂದಿಗೆ

ಒಟ್ಟು ಹನ್ನೊಂದು ಸಂಚಿಕೆಗಳು


**ಈ ಸಂಚಿಕೆಯಲ್ಲಿ....**






ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ

ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು - ೫೬೦ ೦೬೭

# ಸಂಪಾದಕೀಯ



ವಿಶ್ವಸಂಸ್ಥೆಯು 1993ನೇ ಇಸವಿಯನ್ನು ಜಗತ್ತಿನ ಸ್ಥಳೀಯ ಜನರ ವರ್ಷವನ್ನಾಗಿ ಆಚರಿಸಿತು. ಅದರ ಮುಖ್ಯ ಉದ್ದೇಶ ಸ್ಥಳೀಯ ಜನರ ರಕ್ಷಣೆ ಮತ್ತು ಸಾಂಸ್ಕೃತಿಕ ಸಾಮಾಜಿಕ ವೈವಿಧ್ಯತೆಗೆ ಸ್ಥಳೀಯ ಜನರು ನೀಡಿರುವ ಮಾನವೀಯ ಕೊಡುಗೆಯನ್ನು ಗುರುತಿಸುವುದಾಗಿತ್ತು. ಈ ಉದ್ದೇಶ ಸಾಧ್ಯವಾಗುವುದು ಸ್ಥಳೀಯ ಜನರ ನೆಲ, ಸ್ವಯಮಾಡಳಿತ, ಸ್ವಯಂ ಅಭಿವೃದ್ಧಿ, ಸಂಪನ್ಮೂಲಗಳು, ಪರಿಸರ, ಸಂಸ್ಕೃತಿ, ಭಾಷೆ ಮತ್ತು ಶಿಕ್ಷಣ, ಆರೋಗ್ಯ, ಸಾಮಾಜಿಕ ಆರ್ಥಿಕ ಸ್ಥಿತಿ ಇತ್ಯಾದಿಗಳ ಮೇಲೆ ಕ್ರಮ ತೆಗೆದುಕೊಳ್ಳುವುದರ ಮೂಲಕ ಎಂಬುದು ವಿಶ್ವಸಂಸ್ಥೆಯ ನಿಲುವಾಗಿತ್ತು. ಒಂದೇ ವರ್ಷದಲ್ಲಿ ಬದಲಾವಣೆ ಸಾಧ್ಯವಿಲ್ಲವೆಂಬುದನ್ನು ಗುರುತಿಸಿ ವಿಶ್ವಸಂಸ್ಥೆಯು 1994 ಡಿಸೆಂಬರ್‌ನಿಂದ 2004 ಡಿಸೆಂಬರ್‌ವರೆಗಿನ ಅವಧಿಯನ್ನು ಜಗತ್ತಿನ ಸ್ಥಳೀಯ ಜನರುಗಳ ದಶಕವನ್ನಾಗಿ ಘೋಷಿಸಿದೆ. ಆದರೆ ಈ ಉದ್ದೇಶಕ್ಕೆ ಧಕ್ಕೆ ಒದಗಿರುವುದು ವಸಾಹತುಶಾಹಿಕರಣದಿಂದ, ಮಿಲಿಟರಿಕರಣದಿಂದ, ಅಭಿವೃದ್ಧಿಯ ಹೆಸರಿನಲ್ಲಿ ಮುಖ್ಯವಾಹಿನಿ ಸಂಸ್ಕೃತಿಯ ಪ್ರಾಬಲ್ಯದಿಂದ ಹಾಗು ಜನಪರ ಹೋರಾಟಗಳನ್ನು ಹತ್ತಿಕ್ಕುವ, ಪಟ್ಟಭದ್ರ ಹಿತಾಸಕ್ತಿಗಳನ್ನು ರಕ್ಷಿಸುವ ಸರ್ಕಾರಗಳಿಂದ.

ಅತಿ ದೊಡ್ಡ ಪ್ರಜಾಪ್ರಭುತ್ವವೆನಿಸಿಕೊಂಡಿರುವ ನಮ್ಮ ದೇಶದಲ್ಲಿ ನ್ಯಾಯಾಂಗ, ಸಂವಿಧಾನ ಅತ್ಯುಚ್ಚ ಸ್ಥಾನ ಪಡೆದಿದೆ. ಶಾಸನ ರಚಿಸುವ ರಾಜ್ಯ, ಕೇಂದ್ರ ಶಾಸಕಾಂಗ ಸಂಸ್ಥೆಗಳನ್ನೂ ನಿಯಂತ್ರಿಸುವ ಅಧಿಕಾರ ಹೊಂದಿರುವ ಸಂವಿಧಾನವು ಜನತೆಗೆ ಮೂಲಭೂತ ಹಕ್ಕುಗಳಾದ ಸಮಾನತೆ, ಸ್ವಾತಂತ್ರ್ಯದ ಭರವಸೆ ನೀಡುತ್ತದೆ. ಆದರೆ ಇದು ಎಷ್ಟರ ಮಟ್ಟಿಗೆ ಆಚರಣೆಯಲ್ಲಿದೆ ಎಂಬುದು ಪ್ರಶ್ನಾರ್ಹ. ಶಸ್ತ್ರಾಸ್ತ್ರ ಪಡೆಗಳ ವಿಶೇಷ ಅಧಿಕಾರ ಕಾಯ್ದೆ (1958), ಟಾಡಾದಂತಹ ಕಾಯ್ದೆಗಳ ಮೂಲಕ ಭಯದ, ಆತಂಕದ ಸ್ಥಿತಿಯನ್ನುಂಟು ಮಾಡಿ, ಜನರ ಮೂಲಭೂತ ಹಕ್ಕುಗಳನ್ನೆ ದಮನಗೊಳಿಸುತ್ತಿರುವುದನ್ನು ಉತ್ತರ ಪೂರ್ವರಾಜ್ಯಗಳಲ್ಲಿ ನಾವು ಕಾಣಬಹುದು. ತಮ್ಮ ಹಕ್ಕುಗಳಿಗಾಗಿ ನಡೆಸುತ್ತಿರುವ ಜನಪರ ಹೋರಾಟಗಳಲ್ಲಿ ಉತ್ತರ-ಪೂರ್ವ ಭಾರತದ ಸ್ಥಳೀಯ ಮಹಿಳೆಯರ ಜಂಟಿ ವೇದಿಕೆಯೂ ಒಂದು. ವೇದಿಕೆಯ ಮುಖ್ಯ ಉದ್ದೇಶ - ಸ್ಥಳೀಯ ಜನರ ವಿಶೇಷವಾಗಿ ಮಹಿಳೆಯ ಹಕ್ಕುಗಳ ರಕ್ಷಣೆ, ಆ ಹಕ್ಕುಗಳ ಗೌರವಕ್ಕಾಗಿ ಪ್ರೋತ್ಸಾಹಿಸುವುದು. ಸ್ಥಳೀಯ ಸಮುದಾಯಗಳ ಮೇಲೆ, ಅದರಲ್ಲೂ ಮಹಿಳೆಯರ ಸ್ಥಾನ-ಮಾನದ ಮೇಲೆ ಹಾನಿಕಾರ ಪರಿಣಾಮ ಬೀರುತ್ತಿರುವ ಮುಖ್ಯವಾಹಿನಿ ಸಂಸ್ಕೃತಿಯನ್ನು ವಿರೋಧಿಸುವುದರ ಜೊತೆಗೆ ವೇದಿಕೆಯು ಸ್ವಯಮಾಡಳಿತದಲ್ಲಿ ಮಹಿಳೆಯರ ಸಕ್ರಿಯ, ಸಶಕ್ತ ಪಾಲ್ಗೊಳ್ಳುವಿಕೆಗಾಗಿಯೂ, ಸ್ವಯಂ-ನಿರ್ಣಯದ ಹಕ್ಕಿಗೂ ಒತ್ತಾಯಿಸುತ್ತದೆ. ಮಿಲಿಟರಿ ದೌರ್ಜನ್ಯಕ್ಕೆ ಪರವಾನಗಿ ನೀಡುವ ಸಶಸ್ತ್ರ ಪಡೆಗಳ ವಿಶೇಷ ಕಾಯ್ದೆಯನ್ನು, ಭಯೋತ್ಪಾದಕ ಹಾಗು ವಿಧ್ವಂಸಕ ಚಟುವಟಿಕೆಗಳ ಕಾಯ್ದೆಗಳನ್ನು ರದ್ದುಪಡಿಸಲು ಒತ್ತಾಯಿಸುತ್ತದೆ. ಅವರ ಉದ್ದೇಶಗಳಿಗೆ ಮಾನಸ ಬೆಂಬಲ ಸೂಚಿಸುತ್ತದೆ.

ಸರ್ಕಾರದ ಮಿಲಿಟರಿಕರಣವನ್ನು ಪ್ರತಿರೋಧಿಸುವ ಹೋರಾಟಗಳು ಹಿಂಸಾತ್ಮಕವಾಗದೆ, ತೀವ್ರತರವಾಗಬೇಕು. ಬಂದೂಕಿಗೆ ಬಂದೂಕ ಉತ್ತರವಾಗುವುದಿಲ್ಲ, ಸಮಾನತೆ, ಸ್ವಾತಂತ್ರ್ಯವನ್ನಾಧರಿಸಿದ ಸಮಾಜ ನಿರ್ಮಾಣದ ನಂಬಿಕೆಗೆ ಬದ್ಧರಾದಾಗ ಮಾತ್ರ. ಸ್ವಾಯತ್ತತೆ, ಸ್ವಯಂ-ನಿರ್ಣಯದ (Self-deermination) ಹಕ್ಕುಗಳೆ ನಿಜವಾದ ಪ್ರಜಾಪ್ರಭುತ್ವದ ಅಡಿಪಾಯ. ಸಮ ಸಮಾಜದ ನಿರ್ಮಾಣಕ್ಕಾಗಿ ಪರ್ಯಾಯ ದೃಷ್ಟಿ, ಪರ್ಯಾಯ ರಾಜಕೀಯ, ಸಾಮಾಜಿಕ ವ್ಯವಸ್ಥೆಯನ್ನು ಕಂಡುಕೊಳ್ಳುವ ಅವಶ್ಯಕತೆಯಿದೆ. ಆ ನಿಟ್ಟಿನಲ್ಲಿ ನಡೆಯುತ್ತಿರುವ ಹೋರಾಟಗಳು, ಹೋರಾಟದ ಪ್ರಕ್ರಿಯೆಯಲ್ಲಿ ಹುಟ್ಟಿಕೊಳ್ಳುವ 'ಪ್ರಭುತ್ವ ಮಾಲಿನ್ಯ'ವನ್ನು ಪ್ರಶ್ನಿಸಿಕೊಳ್ಳುವ ಅಗತ್ಯವಿದೆ. ಇಲ್ಲಿ ಜರ್ಮನಿಯ ಗ್ರೀನ್ ಪಾರ್ಟಿಯ ಪೆಟ್ರಾಕೆಲ್ಲಿ ಬದುಕಿದ್ದಾಗ ನೀಡಿದ ಹೇಳಿಕೆ ಹೆಚ್ಚು ಸಮಂಜಸ "ಗ್ರೀನ್ ಪಾಲಿಟಿಕ್ಸ್‌ನ ಸತ್ವ ಇರುವುದೆ, ನಂಬಿದ ಮೌಲ್ಯಗಳಂತೆ ಬದುಕುವಲ್ಲಿ ಪಶ್ಚಿಮ ಜರ್ಮನಿಯ ಗ್ರೀನ್ ಪಾರ್ಟಿಯಲ್ಲಿ ನಾವುಗಳು ಅಧಿಕಾರ ಪಡೆದುಕೊಳ್ಳುತ್ತಾ ಹೋದಂತೆ ಒಬ್ಬರಿಗೊಬ್ಬರು ಮೃದುವಾಗಿರುವುದನ್ನು ಬಿಟ್ಟು ಒಬ್ಬರಿಗೊಬ್ಬರು ಪದೇ ಪದೇ ನೋವುಂಟು ಮಾಡುತ್ತಾ ಹೋದೆವು. ಮತ್ತೊಮ್ಮೆ ನಮ್ಮ ಮೌಲ್ಯಗಳಿಗೆ ಮರು ಸಮರ್ಪಿಸಿಕೊಳ್ಳುವ, ಪರಸ್ಪರ ಗೌರವಿಸುವ, ಭಿನ್ನಾಭಿಪ್ರಾಯಗಳನ್ನು ತಾಳಿಕೊಳ್ಳುತ, ಪರಸ್ಪರ ಒತ್ತಾಯಿಸುವುದನ್ನು, ನಿಯಂತ್ರಿಸುವುದನ್ನು ತಡೆಯುವ ಅಗತ್ಯವಿದೆ."

**ಮಾನಸ ಓದುಗರಿಗೆ ಹೊಸ ವರ್ಷ ಆರೋಗ್ಯ, ನೆಮ್ಮದಿಯನ್ನು ನೀಡಲಿ.**

*ಸಂ. ಮಂ.*

# ಈಶಾನ್ಯ ಭಾರತದ ಸ್ಥಳೀಯ ಮಹಿಳೆಯರ ಜಂಟಿ ವೇದಿಕೆ

*ಬಿಹಾರದ ರಾಂಚಿಯಲ್ಲಿ 1997ರ ಡಿಸೆಂಬರ್ 28ರಿಂದ 30ರವರೆಗೆ ನಡೆದ ಮಹಿಳಾ ಚಳುವಳಿಗಳ ಆರನೇ ರಾಷ್ಟ್ರೀಯ ಸಮ್ಮೇಳನದಲ್ಲಿ ಈಶಾನ್ಯ ಭಾರತದ ಸ್ಥಳೀಯ ಮಹಿಳೆಯರ ಜಂಟಿ ವೇದಿಕೆ ಬಿಡುಗಡೆ ಮಾಡಿದ ಹೇಳಿಕೆಯ ಪತ್ರದ ಸಂಗ್ರಹಾನುವಾದವಿದು :*

## ಭಾಗ 1

### ಉದ್ದೇಶ, ಹಿನ್ನೆಲೆ ಮತ್ತು ಇತಿಹಾಸ

1. ಈಶಾನ್ಯ ಭಾರತದ ಸ್ಥಳೀಯ ಮಹಿಳೆಯರ ಜಂಟಿ ವೇದಿಕೆ ಒಮ್ಮತ ರೂಪಿಸುವ ಪ್ರಕ್ರಿಯೆ ಹಾಗೂ ಸ್ಥಳೀಯ ಮಹಿಳೆಯರ ಐಕ್ಯರಂಗ ಸ್ಥಾಪನೆಗೆ ಸಾಕಷ್ಟು ಕೊಡುಗೆ ಸಲ್ಲಿಸಲಿದೆ. ಸಾಮೂಹಿಕ ಧ್ವನಿಯ ಬಲವರ್ಧನೆ, ಸ್ಥಳೀಯ ಜನರ ವಿಶೇಷವಾಗಿ ಈಶಾನ್ಯ ಭಾರತದ ಸ್ಥಳೀಯ ಮಹಿಳೆಯರ ಹಕ್ಕುಗಳ ರಕ್ಷಣೆ ಹಾಗೂ ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಮಟ್ಟದಲ್ಲಿ ಈ ಹಕ್ಕುಗಳ ಸ್ಥಾಪನೆಯ ರಚನಾತ್ಮಕ ಪ್ರಕ್ರಿಯೆಗಳಲ್ಲಿ ಅರ್ಥಪೂರ್ಣವಾಗಿ ಪಾಲ್ಗೊಳ್ಳುವ ಉದ್ದೇಶವನ್ನು ಇದು ಹೊಂದಿದೆ.

2. ಮಣಿಪುರದ ಇಂಫಾಲದಲ್ಲಿ 1997ರ ಸೆಪ್ಟೆಂಬರ್ 13ರಂದು ಈಶಾನ್ಯ ಭಾರತದ ಸ್ಥಳೀಯ ಮಹಿಳೆಯರ ಜಂಟಿ ವೇದಿಕೆ (ಜೆವಿಫ್‌ಐಡಬ್ಲ್ಯು - ಎನ್‌ಇಐ) ಜನ್ಮ ತಳೆಯಿತು. ವಿವಿಧ ಸ್ಥಳೀಯ ಮಹಿಳಾ ಚಳುವಳಿಗಳು ಹಾಗೂ ಸಂಘಟನೆಗಳ ಪ್ರತಿನಿಧಿಗಳು ಈ ಸಭೆಯಲ್ಲಿ ಪಾಲ್ಗೊಂಡಿದ್ದರು. ಈ ಬಹಿರಂಗ ವೇದಿಕೆ - ರಾಷ್ಟ್ರೀಯ ಮಟ್ಟದಲ್ಲಿ ಈ ಭಾಗದ ಮಹಿಳೆಯರನ್ನು ಸಾಮೂಹಿಕ ದನಿಯಾಗಿ ಪ್ರತಿನಿಧಿಸುವ ಇಂತಹ ಮೊದಲ ಪ್ರಯತ್ನವಾಗಿತ್ತು. ಜೆವಿಫ್‌ಐಡಬ್ಲ್ಯು - ಎನ್‌ಇಐನ ಮೊದಲ ತುರ್ತು ಕಾರ್ಯವೇನಾಗಿತ್ತು ಎಂದರೆ - ಬಿಹಾರದ ರಾಂಚಿಯಲ್ಲಿ 1997ರ 28-30 ಡಿಸೆಂಬರ್‌ನಲ್ಲಿ ನಡೆಯುವ 6ನೇ ರಾಷ್ಟ್ರೀಯ ಮಹಿಳಾ ಚಳುವಳಿಗಳ ಸಮ್ಮೇಳನ (ಎನ್‌ಸಿಡಬ್ಲ್ಯುಎಂ)ದಲ್ಲಿ ಪಾಲ್ಗೊಳ್ಳುವುದಾಗಿತ್ತು.

3. ಈಶಾನ್ಯ ಭಾರತದ ಸ್ಥಳೀಯ ಮಹಿಳೆಯರಿಗೆ ಪ್ರಮುಖವಾದ ವಿಚಾರಗಳು ಈವರೆಗೆ ಉಪಖಂಡದ ಮಹಿಳೆಯರ ಸಾಮಾನ್ಯ ಕಾಳಜಿಗಳಲ್ಲಿ ಹುದುಗಿ ಹೋಗಿತ್ತು ಅಥವಾ ಒಟ್ಟಾರೆ ಪ್ರದೇಶದ ಸ್ಥಳೀಯ ಜನರ ಆದ್ಯತೆಗಳ ಪದಗಳೊಳಗೆ ಅಂತರ್ಗತವಾಗಿ ಹೋಗಿತ್ತು. ಇವು ನಿರ್ದಿಷ್ಟ ಅಥವಾ ವಿಶಿಷ್ಟ ಕಾಳಜಿಗಳ ಗುಂಪಾಗಿ ಈ ಸ್ಥಳೀಯ ಮಹಿಳೆಯರ ದೃಷ್ಟಿಕೋನಗಳು ಹಾಗೂ ಆದ್ಯತೆಗಳನ್ನು ಸಾಮಾನ್ಯವಾಗಿ ಕಡೆಗಣಿಸುತ್ತವೆ ಅಥವಾ ವಿರೂಪಗೊಳಿಸುತ್ತವೆ.

4. ಈಶಾನ್ಯ ಭಾರತದ ಸ್ಥಳೀಯ ಮಹಿಳೆಯರ ವಿವಿಧ ಪ್ರತಿನಿಧಿಗಳು, ವಿಶೇಷವಾಗಿ ಮಣಿಪುರದಲ್ಲಿ, ಕರಡು ರಾಷ್ಟ್ರೀಯ ಅರಣ್ಯ ಮಸೂದೆ (1994-96), ಕರಡು ರಾಷ್ಟ್ರೀಯ ಸಂಪನ್ಮೂಲ ನಿರ್ವಹಣೆ ನೀತಿ ಹಾಗೂ ಈಗ ಸ್ಥಳಾಂತರಗೊಂಡ ಜನರ ನೀತಿ (1994-96) ಎಂದು ಕರೆಯಲಾಗುವ ಕರಡು ರಾಷ್ಟ್ರೀಯ ಪುನರ್ವಸತಿ ನೀತಿ ಇತ್ಯಾದಿ ವಿಚಾರಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದರು.

5. ಕಳೆದ ಕೆಲ ವರ್ಷಗಳಲ್ಲಿ ಈ ಪ್ರದೇಶದಲ್ಲಿ ಅರಣ್ಯ ಹಾಗೂ ಸಂಪನ್ಮೂಲ ನಿರ್ವಹಣೆ ವಿಚಾರ ಕುರಿತ ಚರ್ಚೆ, ಏಕರೂಪ ರಾಷ್ಟ್ರೀಯ ನೀತಿಯ ವಿರುದ್ಧ ಒಮ್ಮತದ ನಿಲುವು ತಾಳಿದೆ. ಇದು ಈ ಪ್ರದೇಶದ ಸ್ಥಳೀಯ ಜನರ ಹಿತಗಳಿಗೆ ಮಾರಕ ಎಂದು ಭಾವಿಸಲಾಗಿದೆ. ನಂತರ, ಎಸ್.ಸಿ. ಶುಕ್ಲಾ ನೇತೃತ್ವದ ರಾಷ್ಟ್ರೀಯ ಸಮಿತಿ, ಈ ಪ್ರದೇಶಕ್ಕೆ ಪ್ರತ್ಯೇಕ ನೀತಿಯನ್ನು ಶಿಫಾರಸು ಮಾಡಿದೆ. 1997ರ ಸೆಪ್ಟೆಂಬರ್‌ನಲ್ಲಿ, ಎಸ್. ಸಿ. ಶುಕ್ಲಾ ಸಮಿತಿಯ ಶಿಫಾರಸುಗಳನ್ನು ಭಾರತ ಸರ್ಕಾರ ಒಪ್ಪಿರುವುದಾಗಿ ಪ್ರಕಟಿಸಲಾಗಿದೆ. ಈ ಇಡೀ ಪ್ರದೇಶಕ್ಕೆ ಪ್ರತ್ಯೇಕ ಅರಣ್ಯ ನೀತಿಯನ್ನು ಅಭಿವೃದ್ಧಿ ಪಡಿಸಲು ಕರಡು ಯೋಜನೆಯನ್ನು ರೂಪಿಸಲಾಗಿದೆ :-

6. ರಾಷ್ಟ್ರೀಯ ಆದಿವಾಸಿಗಳ ನೀತಿಯ ಪರವಾದ ಲಾಭಿ ರಾಷ್ಟ್ರಮಟ್ಟದಲ್ಲಿ ಸರ್ಕಾರೇತರ ಸಂಘ ಸಂಸ್ಥೆಗಳ ಪ್ರಯತ್ನ 1995ರಲ್ಲಿ ಆರಂಭವಾಯಿತು.

7. ಈ ಪ್ರದೇಶದ ಸ್ಥಳೀಯ ಜನರ ಮೇಲೆ ಸರ್ಕಾರಿ ಸಂಸ್ಥೆಗಳು ಎಸಗುವ ದುರಾಚಾರ ಹಾಗೂ ಸಶಸ್ತ್ರ ಪಡೆಗಳ (ವಿಶೇಷ ಅಧಿಕಾರ) ಕಾಯಿದೆಯ ವಿರುದ್ಧವೂ ಮಹಿಳಾ ಸಮುದಾಯ ಸಂಘಟನೆಗಳು ಸಂಯುಕ್ತವಾಗಿ ಚಳುವಳಿಗಳನ್ನು ನಡೆಸಿವೆ.

8. ಈ ಪ್ರದೇಶದ ಸ್ಥಳೀಯ ಮಹಿಳೆಯರ ಸಾಮೂಹಿಕ ಯತ್ನಗಳ ಆರಂಭದ ಸಾಧನೆಗಳನ್ನು ಮತ್ತಷ್ಟು ಗಟ್ಟಿಗೊಳಿಸಬೇಕಿದೆ. ಅಲ್ಲದೆ ಆದ್ಯತೆಯ ಮೇಲೆ ಬೆಂಬಲ ನೀಡಬೇಕಿದೆ. ಈವರೆಗೆ, ಈಶಾನ್ಯ ಭಾರತದ ಸ್ಥಳೀಯ ಜನರ ಸಮಸ್ಯೆಗಳನ್ನು ರಾಷ್ಟ್ರೀಯ ವೇದಿಕೆಯಲ್ಲಿ ಪ್ರತಿನಿಧಿಸಲು ಅಥವಾ ಪರಿಶೀಲಿಸಲು ಹೆಚ್ಚಿನ ಪ್ರಯತ್ನ ನಡೆದಿಲ್ಲ.

9. ವಿಶ್ವಾದ್ಯಂತ ತಮ್ಮ ಹಕ್ಕುಗಳಿಗಾಗಿ ಹೋರಾಡುತ್ತಿರುವ ಸ್ಥಳೀಯ ಜನರ ಚಾರಿತ್ರಿಕ ಹೋರಾಟಗಳನ್ನು ಜಂಟಿ ವೇದಿಕೆ ನೆನೆಯುತ್ತದೆ. ಹಾಗೂ ಈ ಪರಂಪರೆಯ ಚೈತನ್ಯದಿಂದಲೇ ಸ್ಥಳೀಯ ಜನರ ಚಳುವಳಿಗಳೊಂದಿಗೆ ತನ್ನ ಒಗ್ಗಟ್ಟನ್ನು ಈ ವೇದಿಕೆ ವ್ಯಕ್ತಪಡಿಸಿದೆ.

10. ಸ್ಥಳೀಯ ಜನರ ಹಕ್ಕುಗಳ ರಕ್ಷಣೆಗಾಗಿ, ಸ್ಥಳೀಯ ಜನರ ಕಾರ್ಯಕಾರಿ ತಂಡ, ತಾರತಮ್ಯ ನಿವಾರಣೆ ಮತ್ತು ಅಲ್ಪಸಂಖ್ಯಾತರ ರಕ್ಷಣೆ ಕುರಿತ ಉಪ ಆಯೋಗ ಹಾಗೂ ವಿಶ್ವಸಂಸ್ಥೆಯ ಮಾನವೀಯ ಹಕ್ಕುಗಳ ಆಯೋಗ ನಡೆಸುವ ಯತ್ನಗಳನ್ನೂ ಈ ಜಂಟಿ ವೇದಿಕೆ ಗುರುತಿಸಿ ಬೆಂಬಲಿಸುತ್ತದೆ.

11. ಅಂತರರಾಷ್ಟ್ರೀಯ ಸ್ಥಳೀಯ ಜನರ ದಶಕ ಮತ್ತು ಕ್ರಮೇಣ ಸ್ಥಳೀಯ ಮಹಿಳೆಯರ ಹಕ್ಕುಗಳಿಗಾಗಿ ಸ್ಥಳೀಯ ಜನರ ಚಳುವಳಿಗಳು ವಿಶೇಷ ಗಮನ ನೀಡಬೇಕೆಂದು ಜಂಟಿ ವೇದಿಕೆ ಬಲವಾಗಿ ಶಿಫಾರಸು ಮಾಡುತ್ತದೆ.

## ಭಾಗ - 2

12. ರಾಂಚಿಯ 6ನೇ ಮಹಿಳಾ ಚಳುವಳಿಯ ರಾಷ್ಟ್ರೀಯ ಸಮ್ಮೇಳನ ಚರ್ಚೆಗಾಗಿ ಮೂರು ವಿಷಯಗಳನ್ನು ಕೈಗೆತ್ತಿಕೊಂಡಿತ್ತು :
   1) ಮಹಿಳೆಯರ ವಿರುದ್ಧ ಹಿಂಸಾಚಾರ
   2) ಮಹಿಳೆಯರ ಸ್ಥಳಾಂತರ
   3) ಸರ್ಕಾರದ ಮಹಿಳಾ ವಿರೋಧಿ ಸ್ವರೂಪ.

13. "ಸರ್ಕಾರದ ಮಹಿಳಾ ವಿರೋಧಿ ಸ್ವರೂಪ"ದ ವಿಚಾರದ ಚರ್ಚೆಗೆ ತನ್ನ ಗಮನ ಕೇಂದ್ರೀಕರಿಸಲು ಜಂಟಿ ವೇದಿಕೆ ಸರ್ವಾನುಮತದಿಂದ ನಿರ್ಧರಿಸಿತು. ಏಕೆಂದರೆ ಇತರ ಎರಡು ವಿಷಯಗಳಿಗೆ ಸಂಬಂಧಿಸಿದಂತೆಯೂ ಮಹಿಳೆಯರು ಅನುಭವಿಸುವ ಬಹುತೇಕ ಸಮಸ್ಯೆಗಳು ಸರ್ಕಾರದ ಮಧ್ಯಪ್ರದೇಶ ಮತ್ತು ಒಳಗೊಳ್ಳುವಿಕೆಯಿಂದಲೇ ಆಗಿತ್ತು.

14. 1997ರ ಸೆಪ್ಟೆಂಬರ್ 21ರಂದು ಜೆಎಫ್‌ಐಡಬ್ಲ್ಯು - ಎನ್‌ಇಐನ ಎರಡನೇ ಸಿದ್ಧತಾ ಸಭೆ ನಡೆಯಿತು. ಮಹಿಳೆಯರ ಕಾಳಜಿಗಳಿಗೆ ಸಂಬಂಧಿಸಿದ ಮೂರು ಕ್ಷೇತ್ರಗಳಲ್ಲಿ ಕೆಲಸ ಮಾಡಲು ಉಪ ಸಮಿತಿಗಳನ್ನು ರಚಿಸಲಾಯಿತು : 1) ಆಡಳಿತದ ಸ್ಥಳೀಯ ವ್ಯವಸ್ಥೆಗಳು ಹಾಗೂ ಸರ್ಕಾರದ ಮಹಿಳಾ ವಿರೋಧಿ ಸ್ವರೂಪ, 2) ಸ್ವಯಂ-ನಿರ್ಧಾರಗಳು ಹಾಗೂ ಜೀವನಾಧಾರವಾದ ಅಭಿವೃದ್ಧಿ ಹಾಗೂ 3) ಆರೋಗ್ಯ.

15. 1997ರ ಅಕ್ಟೋಬರ್‌ನಿಂದ ಡಿಸೆಂಬರ್‌ವರೆಗೆ ಈ ಮೂರೂ ಉಪಸಮಿತಿಗಳ ಹಲವಾರು ಸಭೆಗಳು ನಡೆದವು. ಜಂಟಿ ವೇದಿಕೆಯ ಹೇಳಿಕೆ ಹಾಗೂ ವರದಿಗಳನ್ನು ಅಂತಿಮಗೊಳಿಸುವುದಕ್ಕಾಗಿ ಈ ಮೂರೂ ಉಪಸಮಿತಿಗಳ ವಿಷಯಗಳನ್ನು ಕುರಿತಂತೆ ಮೂರು ಕಮ್ಮಟಗಳು ನಡೆದವು.

16. ಸದಸ್ಯರ ಪ್ರಯಾಣ ಸಿದ್ಧತೆ, ವಸ್ತು ಪ್ರದರ್ಶನವನ್ನು ವಸ್ತು ಸಾಗಣೆ ಹಾಗೂ ಅಂತಿಮ ಕರಡು ಹೇಳಿಕೆ ಹಂಚಿಕೊಳ್ಳುವುದಕ್ಕಾಗಿ 1997ರ ನವೆಂಬರ್ 28ರಂದು ಜಂಟಿ ವೇದಿಕೆಯ ಅಂತಿಮ ಸಿದ್ಧತಾ ಸಭೆ ನಡೆಯಿತು.

17. ಸಮ್ಮೇಳನದಲ್ಲಿ ಜೆಎಫ್‌ಐಡಬ್ಲ್ಯು - ಎನ್‌ಇಐನ 42 ಪ್ರತಿನಿಧಿಗಳು ಪಾಲ್ಗೊಳ್ಳಲು ನೊಂದಾಯಿಸಿದ್ದರು. ಜಂಟಿ ವೇದಿಕೆಯ ಪರಿಣಾಮ ಹಾಗೂ ಪ್ರಕ್ರಿಯೆಗಳ ದಾಖಲಿಸುವಿಕೆ ಹಾಗೂ ಮೌಲ್ಯಮಾಪನಕ್ಕಾಗಿ ನಂತರದ ಚಟುವಟಿಕೆಗಳನ್ನು ಯೋಜಿಸಲಾಗಿದೆ.

18. ಮಣಿಪುರದ ಸಂಘಟನೆ, ಸಂಶೋಧನೆ ಹಾಗೂ ಶಿಕ್ಷಣದ ಕೇಂದ್ರ (ಕೋರ್), ಜೆಪಿಫ್‌ಐಡಬ್ಲ್ಯು - ಎನ್‌ಇಐನ ಸೆಕ್ರೆಟೇರಿಯಟ್ ಆಗಿ ಕಾರ್ಯ ನಿರ್ವಹಿಸುತ್ತಿದೆ.

## ಭಾಗ - ೩

### ಎ - ಆಡಳಿತ ಹಾಗೂ ಸರ್ಕಾರದ ಮಹಿಳಾ ವಿರೋಧಿ ಸ್ವರೂಪ

19. ಕಳೆದ ಅರ್ಧ ಶತಮಾನದಿಂದಲೂ ಸ್ವಯಂ ಆಡಳಿತ ಹಾಗೂ ಸ್ವಯಂ ನಿರ್ಧಾರಗಳಿಗಾಗಿ ಈಶಾನ್ಯ ಭಾರತದ ಸ್ಥಳೀಯ ಜನರು ಹೋರಾಡುತ್ತಲೇ ಇದ್ದಾರೆ. ಈ ರಾಷ್ಟ್ರದ ಭದ್ರತಾ ಪಡೆಗಳು ಹಾಗೂ ವಿವಿಧ ಜನಾಂಗಗಳ ಸಶಸ್ತ್ರ ರಾಷ್ಟ್ರೀಯ ವಿಮೋಚನಾ ಚಳುವಳಿಗಳ ಮಧ್ಯದ ಹಿಂಸಾತ್ಮಕ ಘರ್ಷಣೆಗಳಲ್ಲದೆ ಈ ಹೋರಾಟಗಳು ಅನೇಕ ರೂಪಗಳನ್ನು ಪಡೆದುಕೊಂಡಿದೆ. ಈ ವಿಚಾರಗಳ ಬಗ್ಗೆ ಮಹಿಳಾ ಸಮುದಾಯ ಸಂಘಟನೆಗಳು, ಯುವ ತಂಡಗಳು, ವಿದ್ಯಾರ್ಥಿ ಸಂಘಟನೆಗಳು ಹಾಗೂ ಮಾನವೀಯ ಹಕ್ಕುಗಳ ಸಂಘಟನೆಗಳು ಒಳಗೊಂಡಂತೆ ಇನ್ನಿತರ ಹಲವಾರು ಗುಂಪುಗಳು ಈ ಬಗ್ಗೆ ಕಳವಳಗೊಂಡಿವೆ. ಆದರೂ ಹೇಡಿತನದ 'ತುರ್ತುಸ್ಥಿತಿ'ಯ ಕ್ರಮಗಳು, ಪ್ರಜಾಸತ್ತಾತ್ಮಕ ವಿರೋಧಿ ವಿಧೇಯಕ ಹಾಗೂ ಮಿಲಿಟರಿ ಸಂಸ್ಥೆಗಳ ಬಳಕೆಯಿಂದ ಯಾವಾಗಲೂ ಈ ಹೋರಾಟಗಳನ್ನು ದಮನಕಾರಿ ಕ್ರಮಗಳಿಂದ ನಿಯಂತ್ರಿಸಲು ಯತ್ನಿಸಿವೆ.

20. 1997ರ ಆಗಸ್ಟ್‌ನಲ್ಲಿ, ವಿಶ್ವಸಂಸ್ಥೆಯ ಮಾನವೀಯ ಹಕ್ಕುಗಳ ಸಮಿತಿಯ 6ನೇ ಅಧಿವೇಶನ ಮುಗಿದ ಕೂಡಲೇ, ಭಾರತದ ಮುಖ್ಯ ನ್ಯಾಯಾಧೀಶ ವರ್ಮಾ ನೇತೃತ್ವದಲ್ಲಿ ಸುಪ್ರೀಂ ಕೋರ್ಟ್‌ನ ಸಂವಿಧಾನಾತ್ಮಕ ಪೀಠ, 1958ರ ಸಶಸ್ತ್ರ ಪಡೆಗಳ ವಿಶೇಷ ಅಧಿಕಾರ ಕಾಯಿದೆಯ ಸಂವಿಧಾನಾತ್ಮಕ ಔಚಿತ್ಯತೆ ಪ್ರಶ್ನಿಸಿದ ಅರ್ಜಿಗಳನ್ನು ಕಡೆಗೂ ಪರಿಶೀಲಿಸಿತು. 1997ರ ನವೆಂಬರ್‌ನಲ್ಲಿ ಕೆಲವು ಸಣ್ಣಪುಟ್ಟ ನಿಯಂತ್ರಣಗಳೊಂದಿಗೆ ಈ ಕಾಯಿದೆಯನ್ನು ಈ ದೇಶದ ಸರ್ವೋಚ್ಚ ನ್ಯಾಯಾಲಯ ಎತ್ತಿ ಹಿಡಿಯಿತು. ಕೇವಲ ಸಣ್ಣ ಪುಟ್ಟ ನಿಯಂತ್ರಣಗಳ ನಿಯಮಾವಳಿಗಳೊಂದಿಗೆ ಈ ಕಾಯಿದೆಯನ್ನು ಎತ್ತಿ ಹಿಡಿಯುವುದು ಅರ್ಥವಿಹೀನ. ಸುಪ್ರೀಂಕೋರ್ಟ್‌ನ ಈ ತೀರ್ಪು ಅಮಾನವೀಯವಾದದ್ದು, ಮಹಿಳಾ ವಿರೋಧಿ, ಪ್ರಜಾಸತ್ತಾತ್ಮಕ ವಿರೋಧಿ, ಸ್ಥಳೀಯ ಜನತೆಯ ಹಕ್ಕುಗಳು ಸೇರಿದಂತೆ ಸಾರ್ವಕಾಲಿಕವಾಗಿ ಒಪ್ಪಿತವಾದ ಮಾನವೀಯ ಹಕ್ಕುಗಳ ಎಲ್ಲಾ ತತ್ವಗಳಿಗೆ ಇದು ವಿರೋಧವಾದದ್ದು.

21. ಸ್ವಯಂ ಆಡಳಿತ ಹಾಗೂ ಸ್ವಯಂ ನಿರ್ಧಾರದ ಹೋರಾಟಗಳನ್ನು ಕುರಿತ ವಿಚಾರಗಳು ವಿವಿಧ ಬಗೆಯವು.

22. ಈ ಪ್ರದೇಶವನ್ನು ಕಾಪು (ಕಾವಲು) ವಲಯವಾಗಿ ಕಾಪಾಡಿಕೊಳ್ಳುವ ಏಕ ಅಂಶದ ಕಾರ್ಯಕ್ರಮದಿಂದಾಗಿ ಇಡೀ ಆಡಳಿತ ಹಾಗೂ ಅಭಿವೃದ್ಧಿ ಪ್ರಕ್ರಿಯೆ, ವ್ಯವಸ್ಥೆಗಳು ವಿರೂಪಗೊಂಡಿದೆ.

23. ಹೀಗಾಗಿ ಈ ವಲಯ ಭಾರಿ ಮಿಲಿಟರಿ ಬಂದೋಬಸ್ತ್‌ನಲ್ಲಿದೆ. ಮಿಲಿಟರಿ ಚಟುವಟಿಕೆಗಳು ಹಾಗೂ ಕಾರ್ಯಾಚರಣೆಗಳಿಗೆ ಅನುಕೂಲವಾಗುವ ರೀತಿಯಲ್ಲಿ ಮೂಲ ಸೌಕರ್ಯಗಳು ಹಾಗೂ ಸಂಪರ್ಕ ವ್ಯವಸ್ಥೆಯನ್ನು ಅಭಿವೃದ್ಧಿಪಡಿಸಲಾಗಿದೆ. ನಾಗರಿಕ ಆಡಳಿತವೆನ್ನುವುದು ಇಲ್ಲಿ ಅಣಕ.

24. ಈ ವಲಯದಲ್ಲಿ ಸರ್ಕಾರದ ಮಾನವೀಯ ಹಕ್ಕುಗಳ ಉಲ್ಲಂಘನೆಗಳ ಪ್ರಕರಣಗಳ ದಾಖಲೆ ಕರುಣಾಜನಕವಾದದ್ದು. ದಾಖಲಾಗದ ಪ್ರಕರಣಗಳು ಅಸಂಖ್ಯ. ಅಂತರರಾಷ್ಟ್ರೀಯ ಮಾನವೀಯ ಹಕ್ಕುಗಳ ಸಮಾವೇಶಕ್ಕೆ ನಿರ್ಣಯಗಳನ್ನು ಭಾರತ ಅಂಗೀಕರಿಸಿದ್ದರೂ ಈ ಉಲ್ಲಂಘನೆಗಳು ಇದ್ದೇ ಇವೆ.

25. ಅನುಸೂಚಿತ ಜಾತಿ ಹಾಗೂ ಅನುಸೂಚಿತ ವರ್ಗಗಳ ರಾಷ್ಟ್ರಪತಿಗಳ ಪಟ್ಟಿಯನ್ನು ಅಪೂರ್ಣ ಹಾಗೂ ಅಸಮರ್ಪಕ ಎಂದು ಈ ಕಾಳಜಿಗಳ ತನಿಖೆಗೆ ನೇಮಿಸಲಾಗಿದ್ದ ವಿವಿಧ ಸಂಸದೀಯ ಸಮಿತಿಗಳು ಗುರುತಿಸಿವೆ. ಈ ಪ್ರದೇಶದ ಕೆಲವು ಸ್ಥಳೀಯ ಜನರನ್ನು ಈ ಅನುಸೂಚಿತ ವರ್ಗಗಳ ಪಟ್ಟಿ ಪೂರ್ಣ ಕಡೆಗಣಿಸಿವೆ ಅಥವಾ ತಪ್ಪಾಗಿ ವರ್ಗೀಕರಿಸಿವೆ. ಒಟ್ಟಾಗಿ ಭಾರತದ ಕೆಲವು ಜನರು ಹಾಗೂ ನಿರ್ದಿಷ್ಟವಾಗಿ ಈ ವಲಯದ ಸ್ಥಳೀಯ ಸ್ಥಾನಮಾನ ಗುರುತಿಸಲು ಸರ್ಕಾರದ ತಿರಸ್ಕಾರ ಕಳವಳಕ್ಕೆ ಮುಖ್ಯಕಾರಣ.

26. ಮಾನವೀಯ ಹಕ್ಕುಗಳ ವಿಚಾರ ಹಾಗೂ ಸ್ಥಳೀಯ ಜನರ ಆಡಳಿತ ಪರಿಗಣಿಸುವಲ್ಲಿ ಇರುವ ಮೂಲ ಪ್ರಶ್ನೆ ಸಾಮೂಹಿಕ ಹಕ್ಕುಗಳದ್ದು - ಭಾರತ ಸರ್ಕಾರದ ಪ್ರಜಾಸತ್ತಾತ್ಮಕ ಪ್ರಕ್ರಿಯೆಗಳು, ಒಟ್ಟಾರೆಯಾಗಿ ಭಾರತೀಯ ಜನಸಂಖ್ಯೆ ಹಾಗೂ ಕೇಂದ್ರದೊಳಗೇ ರಚಿಸಲಾಗಿರುವ ಪ್ರಾದೇಶಿಕ ರಾಜ್ಯಗಳ ಸ್ವರೂಪದೊಳಗೇ ಸಾಮೂಹಿಕತೆಯನ್ನು ಗುರುತಿಸುತ್ತದೆ. ಈ

ಪ್ರಾದೇಶಿಕ ರಾಜ್ಯಗಳ ಗಡಿಗಳಿಂದ ಛಿದ್ರಗೊಂಡಿರುವ ಸ್ಥಳೀಯ ಜನತೆಯ ಅಗತ್ಯಗಳು ಹಾಗೂ ಪ್ರಜಾಸತ್ತಾತ್ಮಕ ಸಂಸ್ಥೆಗಳನ್ನು ಕಡೆಗಣಿಸುತ್ತದೆ.

27. ಸ್ಥಳೀಯ ಜನರಲ್ಲಿನ ಪ್ರಜಾಸತ್ತಾತ್ಮಕ ಸಂಸ್ಥೆಗಳು ಒಮ್ಮತದಿಂದ ಕೂಡಿದಂತಹದ್ದು. ಮತದಾರರು ಅಥವಾ ಬಹುಮತ ರಾಜಕೀಯ ಆಧರಿಸಿದ್ದಲ್ಲ ಇದು. ವಿಭಿನ್ನ ಬಣಗಳ ಮಧ್ಯದ ಹೊಂದಾಣಿಕೆ, ಸಂಖ್ಯಾ ಬಾಹುಳ್ಯದ ಹೇರಿಕೆಯನ್ನು ಆಧರಿಸಿರುವುದಿಲ್ಲ, ಬದಲಿಗೆ, ಇಡೀ ತಂಡ ಒಂದೇ ನಿಲುವು ಒಪ್ಪಿಕೊಳ್ಳುವವರೆಗೆ ಸಂಧಾನದ ಸತತ ಪ್ರಕ್ರಿಯೆ ಇರುತ್ತದೆ. ಎಲ್ಲಾ ಮುಖ್ಯ ದೃಷ್ಟಿ ಕೋನಗಳಿಗೂ ಇಲ್ಲಿ ಸ್ಥಾನವಿರುತ್ತದೆ. ಇದು ಭಾರತೀಯ ಪ್ರಜಾಸತ್ತಾತ್ಮಕ ಆಡಳಿತದ ಸ್ಥಾಪಿತ ಪ್ರಕ್ರಿಯೆಗಳಿಗೆ ಮೂಲಭೂತವಾಗಿ ವಿರೋಧವಾದದ್ದು.

28. ನಮ್ಮದೇ ಅಗತ್ಯಗಳು ಹಾಗೂ ಆಶೋತ್ತರಗಳಿಗೆ ಗಮನವಿಲ್ಲದೆ ನಮ್ಮ ಜನರ ಮೇಲೆ ತನ್ನದೇ ಸರ್ಕಾರಿ ಕ್ರಮಗಳನ್ನು ನಮ್ಮ ಜನರ ಮೇಲೆ ಹೇರಲು ಭಾರತ ಸರ್ಕಾರ ಅರ್ಹವಾದದ್ದು ಎಂದು ಭಾವಿಸಿರುವುದು ದುರದೃಷ್ಟಕರ. ನಮ್ಮ ಪಾರಂಪರಿಕ ಆಡಳಿತ ವಿಧಾನಗಳು ಹಾಗೂ ಹೇರಿದ ಸಂಸ್ಥೆಗಳ ಮಧ್ಯದ ಸಾಮರಸ್ಯ ಇಲ್ಲದಿರುವಿಕೆ ಈ ವಲಯದಲ್ಲಿ ಅರಾಜಕತೆಯ ಅಪಾಯ ತಂದೊಡ್ಡಿದೆ. ಸಮುದಾಯದ ಅಭಿಪ್ರಾಯಗಳು ಹಾಗೂ ಆಶೋತ್ತರಗಳ ಪ್ರತಿನಿಧಿಗಳೆಂದು ಚುನಾಯಿತ ಪ್ರತಿನಿಧಿಗಳನ್ನು ಗುರುತಿಸಲಾಗುವುದಿಲ್ಲ.

29. ಇದೇ ರೀತಿ ಕಾರ್ಯಾಂಗ-ಅಧಿಕಾರಶಾಹಿಯಲ್ಲಿ ಭ್ರಷ್ಟಾಚಾರ ಹಾಸು ಹೊಕ್ಕಾಗಿದೆ. ಸಾರ್ವಜನಿಕ ಕೆಲಸಗಳು ಅಪೂರ್ಣವಾಗಿ ಉಳಿದಿವೆ.

30. ಸಾರ್ವಜನಿಕ ಕೆಲಸ ನಿರ್ವಹಣೆಯಲ್ಲಿ ಸಮುದಾಯದ ಪಾಲ್ಗೊಳ್ಳುವಿಕೆಗೆ ಉತ್ತೇಜನವಿರುವುದಿಲ್ಲ.

31. ಈ ವ್ಯವಸ್ಥೆಗಳ ವೈಫಲ್ಯಕ್ಕೆ ಬರೀ ದುರಾಡಳಿತ ಅಥವಾ ಭ್ರಷ್ಟಾಚಾರ ಕಾರಣವಲ್ಲ. ಮುಖ್ಯವಾಹಿನಿಯ ವ್ಯವಸ್ಥೆಯೊಂದಿಗಿನ ಅಸಂಗತತೆ ಸಮಸ್ಯೆಯ ಮೂಲ. ಇರುವ ವ್ಯವಸ್ಥೆಯಲ್ಲೇ ಸಣ್ಣ ಪುಟ್ಟ ಬದಲಾವಣೆ ಅಥವಾ ಹೆಚ್ಚಿನ ಹಣಕಾಸು ನೀಡಿಕೆಯಿಂದ ಸಮಸ್ಯೆ ಪರಿಹಾರವಾಗುವುದಿಲ್ಲ. ಸ್ವಯಮಾಡಳಿತದ ದೇಶೀ ವ್ಯವಸ್ಥೆಯ ಪುನರ್ನವೀಕರಣ ಹಾಗೂ ಮುಖ್ಯ ವಾಹಿನಿಯ ಆಡಳಿತ ವ್ಯವಸ್ಥೆಯೊಂದಿಗಿನ ಮುಖಾಮುಖಿಗೆ ಸೂಕ್ತ ಕ್ರಮಗಳ ಗಂಭೀರ ಯತ್ನದಲ್ಲಿ ಪರಿಹಾರ ಅಡಗಿದೆ.

32. ನಮ್ಮ ಸಮುದಾಯಗಳ ಸ್ವಯಂ ನಿರ್ಧಾರ ಹಾಗೂ ಸ್ವಯಂ ಆಡಳಿತದಲ್ಲಿ ಮಹಿಳೆಯರ ಪೂರ್ಣ ಪಾಲ್ಗೊಳ್ಳುವಿಕೆಗೆ ನಮ್ಮದೇ ಸ್ಥಳೀಯ ವ್ಯವಸ್ಥೆಗಳಲ್ಲಿ ಅವಕಾಶವಿಲ್ಲ ಎಂಬುದು ನಿಜ. ಕೆಲವು ಸಲ, ಮುಖ್ಯವಾಹಿನಿಯ ಸಂಸ್ಕೃತಿಯೊಂದಿಗಿನ ಮುಖಾಮುಖಿ ಅಥವಾ ಮಿಳಿತಗಳು, ನಮ್ಮದೇ ವ್ಯವಸ್ಥೆಯಲ್ಲಿ ಮಹಿಳೆಯರ ಸ್ಥಾನಮಾನಗಳನ್ನು ಕೆಳಗಿಳಿಸಿವೆ. ಈ ಎರಡೂ ಸಂದರ್ಭಗಳಲ್ಲೂ, ಮಹಿಳೆಯರನ್ನು ನಮ್ಮ ದೇಶೀ ರಾಷ್ಟ್ರದ ಪೂರ್ಣಪ್ರಮಾಣದ ನಾಗರೀಕರಾಗಿ ಪರಿಗಣಿಸಬೇಕು. ಎಲ್ಲಾ ಸ್ವಯಂ ಆಡಳಿತದ ಸಂಸ್ಥೆಗಳಲ್ಲಿ ಮಹಿಳೆಯರ ಪೂರ್ಣ ಪಾಲ್ಗೊಳ್ಳುವಿಕೆ ಇರಬೇಕು.

33. ಮಹಿಳಾ ಚಳುವಳಿಗಳ 6ನೇ ರಾಷ್ಟ್ರೀಯ ಸಮ್ಮೇಳನಕ್ಕೆ ಜಂಟಿ ವೇದಿಕೆ 8 ಶಿಫಾರಸುಗಳನ್ನು ಮಾಡಿದೆ. ಇವುಗಳಲ್ಲಿ ಸಶಸ್ತ್ರ ಪಡೆ (ವಿಶೇಷ ಅಧಿಕಾರ) ಕಾಯಿದೆ, ಭಯೋತ್ಪಾದಕ ಹಾಗೂ ವಿಧ್ವಂಸಕ ಚಟುವಟಿಕೆಗಳ (ತಡೆ) ಕಾಯಿದೆಗಳ ರದ್ದು, ಸ್ಥಳೀಯ ಸ್ವಯಮಾಡಳಿತ ಸ್ಥಳೀಯ ಸಂಸ್ಥೆಗಳ ಪುನರ್ ಸ್ಥಾಪನೆ, ಸ್ವಯಮಾಡಳಿತದ ದೇಶೀ ಸಂಸ್ಥೆಗಳಲ್ಲಿ ಮಹಿಳೆಯರ ಸಂಘಟನೆಗಳ ಪೂರ್ಣ ಪಾಲ್ಗೊಳ್ಳುವಿಕೆಗೆ ಬೆಂಬಲ, ಆರ್ಥಿಕ ವಸಾಹತೀಕರಣ ಅಥವಾ ಮುಖ್ಯವಾಹಿನಿಯ ಜನರ ವಲಸೆಯಿಂದ ಸ್ಥಳೀಯ ಜನರ ಭೂಮಿ, ಪ್ರದೇಶಗಳ ರಕ್ಷಣೆಗೆ ಭಾರತ ಸರ್ಕಾರದ ಕ್ರಮ ಇತ್ಯಾದಿ ಶಿಫಾರಸುಗಳು ಸೇರಿವೆ.

### ಬಿ. ಸ್ವಯಂ - ನಿರ್ಧಾರ ಮತ್ತು ಸುಸ್ಥಿರ ಅಭಿವೃದ್ಧಿ

34. ಯಾವುದೇ ಜನಾಂಗದ ಅದರಲ್ಲೂ ಸ್ಥಳೀಯ ಜನಾಂಗದ ಉಳಿವು ಹಾಗೂ ಬಾಳಿಕೆ ಸಂಕೀರ್ಣವಾದದ್ದು ಎಂಬುದನ್ನು ಈ ವಲಯದ ಸ್ಥಳೀಯ ಮಹಿಳೆಯರು ನಂಬುತ್ತಾರೆ.

35. ಎಲ್ಲಾ ಮಾನವೀಯ ಚಟುವಟಿಕೆಯ ಉದ್ದೇಶ, ಮಾನವೀಯ ಸಮಾಜದ ಪೋಷಿಸುವಿಕೆ ಹಾಗೂ ಭವಿಷ್ಯವನ್ನು ಉಜ್ವಲಗೊಳಿಸುವುದು.

36. ಹೀಗಾಗಿ, ಯಾರೇ ಮನುಷ್ಯರ ಶಕ್ತಿಗುಂದುವಿಕೆಗೆ ಕಾರಣವಾಗುವ ಚಟುವಟಿಕೆ, ಭವಿಷ್ಯದ ಜನಾಂಗದ ಜೀವನ ಸಾಮರ್ಥ್ಯ ಅಥವಾ ಸುಧಾರಣೆ ಜತೆ ರಾಜಿಯಾಗುವ ಸರ್ಕಾರ ಅಥವಾ ಅಧಿಕಾರ ಶಕ್ತಿಗಳ ಕೂಟ, ಮನುಷ್ಯರ ಜೀವನ ಮಟ್ಟ ಸುಧಾರಣೆಗೆ ವಿರೋಧವಾಗಿದೆ.

37. ಇಂತಹ ಯತ್ನಗಳ ವಿರುದ್ಧ ದೊಡ್ಡ ರಕ್ಷಣೆ ಎಂದರೆ, ಆರ್ಥಿಕ ಹಾಗೂ ಸಾಂಸ್ಕೃತಿಕ ಸಂಪತ್ತು ಸೇರಿದಂತೆ ಯಾವುದೇ ಸಂಸ್ಥೆ ಅಥವಾ ಸರ್ಕಾರದಿಂದ ಅಧಿಕಾರ ಕೇಂದ್ರೀಕರಣದ ತಡೆ.

38. ನಮ್ಮದೇ ಆರ್ಥಿಕ ಹಾಗೂ ಸಾಂಸ್ಕೃತಿಕ ರೂಪುರೇಷೆಗಳು ಮತ್ತು ಭವಿಷ್ಯ ನಿರ್ಧರಿಸಲು ನಮ್ಮ ಹಕ್ಕುಗಳನ್ನು ಮೊಟಕುಗೊಳಿಸುವ ಸಮಾಜದ ಯಾವುದೇ ಸಂಸ್ಥೆಯ ಹಕ್ಕನ್ನು ಈಶಾನ್ಯ ಭಾರತದ ಸ್ಥಳೀಯ ಮಹಿಳೆಯರಾದ ನಾವು ನಿರಾಕರಿಸುತ್ತೇವೆ.

39. ಮುಖ್ಯವಾಹಿನಿಯ ಸಂಸ್ಕೃತಿ ಮತ್ತು ಆರ್ಥಿಕ ಹಿತಾಸಕ್ತಿಗಳಿಂದ ನಮ್ಮ ಭೂ ರಕ್ಷಣೆಯ ನಮ್ಮ ಜನರ ಹಕ್ಕನ್ನು ನಾವು ಪ್ರತಿಪಾದಿಸುತ್ತೇವೆ.

40. ನಮ್ಮ ಒಪ್ಪಿಗೆ ಹಾಗೂ ಅಂಗೀಕಾರ ಇಲ್ಲದೆಯೆ, ಮುಖ್ಯವಾಹಿನಿಯ ಸಮುದಾಯಗಳಿಗೆ ವ್ಯಾಪಕ ವಲಸೆ ಹಾಗೂ ಭೂಮಿಗಳ ಸ್ವಾಧೀನದ ಹಕ್ಕುಗಳನ್ನು ನೀಡುವ ಕ್ರಮದ ವಿರುದ್ಧ ರಕ್ಷಣೆ ಇಲ್ಲದಿರುವುದನ್ನು ನಾವು ಪ್ರತಿಭಟಿಸುತ್ತೇವೆ. ಈ ರೀತಿ ಅನ್ಯ ಜನಾಂಗದ ಆಕ್ರಮಣ ನಮ್ಮದೇ ಪೂರ್ವಿಕರ ನೆಲದಲ್ಲಿ ನಮ್ಮ ಜನರನ್ನು ಕಡೆಗಣಿಸಿ ಆರ್ಥಿಕ ತೊಂದರೆಗಳನ್ನು ಉಂಟು ಮಾಡಿದೆ. ಈ ಆಚರಣೆಯನ್ನು ನವವಸಾಹತುಶಾಹಿ ಎಂದು ಗುರುತಿಸಬೇಕು. ಇದು ನಮ್ಮ ಸಾಮೂಹಿಕ ಹಕ್ಕುಗಳ ಉಲ್ಲಂಘನೆಯಾಗಿದೆ.

41. ಸಂಕೀರ್ಣ ಅಂಶಗಳಿಂದ ನಮ್ಮ ದೇಶೀ ಅರ್ಥ ವ್ಯವಸ್ಥೆ ಹಾಗೂ ನಮ್ಮ ಪರಿಸರದ ಇಡಿಯ ವಿನಾಶದ ಬಗ್ಗೆ ಗಮನ ಸೆಳೆಯಲು ಬಯಸುತ್ತೇವೆ. ದೇಶೀ ಜ್ಞಾನ ವ್ಯವಸ್ಥೆ ಹಾಗೂ ಸ್ಥಳೀಯ ನಿರ್ವಹಣಾ ಸಂಸ್ಥೆಗಳ ವಿರುದ್ಧ ತಾರತಮ್ಯದ ಧೋರಣೆ ಇದಕ್ಕೆ ಕಾರಣ.

42. ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಸರ್ಕಾರಿ ಸಂಸ್ಥೆಗಳ ಮಧ್ಯದ ಅನೈತಿಕ ಬಾಂಧವ್ಯದಿಂದ, ಈ ತಾರತಮ್ಯದ ಪರಿಣಾಮ ನಮ್ಮ ದೇಶೀ ಪರಿಸರ ವ್ಯವಸ್ಥೆ ನಿರ್ವಹಣಾ ತಂತ್ರಜ್ಞಾನಗಳನ್ನು ಮೂಲೆ ಗುಂಪು ಮಾಡಿದೆ.

43. ನಮ್ಮ ಜ್ಞಾನ ವ್ಯವಸ್ಥೆಯ ಉಳಿಕೆ ಪಳಿಕೆಗಳೇ ಈಗಲೂ, ಏಷ್ಯಾದ ಬಹುತೇಕ ಜನರನ್ನು ಕಾಡುವ ತೀವ್ರತರ ಬಡತನದಿಂದ ನಮ್ಮ ಬಹುತೇಕ ಜನರನ್ನು ರಕ್ಷಿಸಿದೆ ಎಂಬುದನ್ನು ಗಮನಿಸಬೇಕು.

44. ಹೀಗಾಗಿ, ನಾವು "ಹಿಂದುಳಿದ", "ಬಡ" ಹಾಗೂ "ಅಭಿವೃದ್ಧಿ ಶೀಲ" ಎಂಬಂತಹ ಪದಗಳನ್ನು ನಮ್ಮ ಸಮಾಜ, ಸಂಸ್ಥೆ ಹಾಗೂ ಜನರಿಗೆ ತಾರತಮ್ಯದ ದೃಷ್ಟಿಯಲ್ಲಿ ಬಳಸುವುದನ್ನು ನಾವು ಪ್ರತಿಭಟಿಸುತ್ತೇವೆ.

45. ನಮ್ಮ ಜನರ ಜೀವನ ಮಟ್ಟ ಸುಧಾರಣೆ ಮಾಡುವ ಯಾವುದೇ ಯತ್ನದ ಮೂಲದಲ್ಲಿ ನಮ್ಮ ಸ್ಥಳೀಯ ಆಚರಣೆಗಳ ಮೌಲ್ಯದ ಗುರುತಿಸುವಿಕೆ ಇರಬೇಕೆಂದು ಒತ್ತಾಯಿಸುತ್ತೇವೆ.

46. ಸ್ಥಾನಮಾನದ ಗುರುತಿಸುವಿಕೆ ಇಲ್ಲದಿರುವುದರಿಂದ ಹಾಗೂ ಅಧಿಕೃತ ಬಳಕೆ ವಿರುದ್ಧ ತಾರತಮ್ಯ ಧೋರಣೆಯಿಂದ ಸ್ಥಳೀಯ ಭಾಷೆಗಳನ್ನು ತೀವ್ರವಾಗಿ ಕಡೆಗಣಿಸಲಾಗುತ್ತದೆ. ಭಾಷೆಗಳ ಪಟ್ಟಿ (ಎಂಟನೇ ಪಟ್ಟಿ), ಪಟ್ಟಿಯಲ್ಲಿ ಇಲ್ಲದಿರುವ ಭಾಷೆಗಳ ಪೂರ್ಣ ಬೆಳವಣಿಗೆಗೆ ತಡೆಯಾಗುತ್ತದೆ.

47. ವಿಶೇಷವಾಗಿ ಪ್ರದರ್ಶಕ ಹಾಗೂ ದೃಶ್ಯಕಲೆಗಳ ಸ್ಥಳೀಯ ಜ್ಞಾನ ವ್ಯವಸ್ಥೆಯನ್ನು ಮುಖ್ಯವಾಹಿನಿ ಸಂಸ್ಕೃತಿ, ಸ್ಥಳೀಯ ಸಮುದಾಯದೊಂದಿಗೆ ಯಾವುದೇ ಔಪಚಾರಿಕ ಒಪ್ಪಂದವಿಲ್ಲದೆಯೇ ಪಡೆದುಕೊಳ್ಳುತ್ತವೆ.

48. ಮುಖ್ಯವಾಹಿನಿಯ ಸಮಾಜಗಳ ಜ್ಞಾನ ವ್ಯವಸ್ಥೆಗಿಂತ ಸ್ಥಳೀಯ ಜ್ಞಾನ ವ್ಯವಸ್ಥೆಗಳು, ಎಲ್ಲಾ ಸಂದರ್ಭಗಳಲ್ಲೂ ಅಲ್ಲದಿದ್ದರೂ ಬಹುಪಾಲು ಹೆಚ್ಚು ಲಿಂಗ ಸಮಾನತೆ ಹೊಂದಿರುವಂತಹವು.

49. ಸ್ಥಳೀಯ ಕಾನೂನುಗಳು ಹಾಗೂ ಆಚರಣೆಗಳ ಚೌಕಟ್ಟಿನಲ್ಲಿ ನಮ್ಮ ಸಮಾಜಗಳ ಲಿಂಗ ವ್ಯವಸ್ಥೆಯ ಸಮತೋಲನ ಕಾಪಾಡುವಿಕೆಗಾಗಿ ಸ್ಥಳೀಯ ಮಹಿಳೆಯರು ಹಾಗೂ ಸ್ಥಳೀಯ ಮಹಿಳಾ ಸಂಘಟನೆಗಳ ಎಲ್ಲಾ ಯತ್ನಗಳನ್ನೂ ಬೆಂಬಲಿಸಲೂ ವಿಶೇಷ ಪ್ರಯತ್ನಗಳನ್ನು ಮಾಡಬೇಕೆಂದು ನಾವು ಒತ್ತಾಯಿಸುತ್ತೇವೆ.

50. ಮುಖ್ಯವಾಹಿನಿಯ ಸಂಸ್ಕೃತಿ ಹಾಗೂ ಸಮಾಜಗಳ ಮಹಿಳೆಯರಿಗೆ ಹೋಲಿಸಿದರೆ, ತಮ್ಮದೇ ಸಮುದಾಯಗಳಲ್ಲಿ ಸ್ಥಳೀಯ ಮಹಿಳೆಯರು ಹೆಚ್ಚಿನ ಸ್ಥಾನಮಾನ ಪಡೆದಿದ್ದು, ಈ ಅನ್ಯ ಪಿತೃಪ್ರಧಾನ ಸಂಸ್ಕೃತಿಗಳು ಹಾಗೂ ಸಂಸ್ಥೆಗಳ ಪರಿಣಾಮಗಳು ನಮ್ಮ ಸ್ಥಾನಮಾನವನ್ನು ಕುಗ್ಗಿಸಿವೆ.

51. ನಮ್ಮ ಜನರ ಪಾರಂಪರಿಕ ಬದುಕಿನಲ್ಲಿ ನಮ್ಮ ಯುವಜನರ ಶಿಕ್ಷಣ ಹಾಗೂ ತರಬೇತಿ ಮುಖ್ಯ ವಿಚಾರವಾಗಿತ್ತು. ಪಾಶ್ಚಿಮಾತ್ಯ ಮತ್ತಿತರ ಮುಖ್ಯವಾಹಿನಿಯ ಸಂಸ್ಕೃತಿಗಳು, ಧರ್ಮ ಹಾಗೂ ಆಡಳಿತಗಳ ಆಕ್ರಮಣಕಾರಿ ಮಧ್ಯ ಪ್ರವೇಶಿಸುವಿಕೆಯಿಂದ ಪಾರಂಪರಿಕ ಮೌಲ್ಯಗಳು ಮತ್ತು ಶಿಕ್ಷಣ ವ್ಯವಸ್ಥೆ ಕುಸಿದಿವೆ. ಈ ಪರಕೀಯ ವ್ಯವಸ್ಥೆ, ಈ ಅಂತರವನ್ನು ತುಂಬಲು ಅಸಮರ್ಥವಾಗಿದ್ದು, ನಮ್ಮ ಯುವಜನರು 'ಶಿಕ್ಷಣ'ದ ನಿಜವಾದ ಅರ್ಥದಲ್ಲಿ ಅಶಿಕ್ಷಿತರಾಗಿಯೇ ಉಳಿದಿದ್ದಾರೆ.

52. ಈಶಾನ್ಯ ಭಾರತದ ಸ್ಥಳೀಯ ಮಹಿಳೆಯರ ಜಂಟಿ ವೇದಿಕೆ, ಆರನೇ ರಾಷ್ಟ್ರೀಯ ಮಹಿಳಾ ಚಳುವಳಿಗಳ ಸಮ್ಮೇಳನಕ್ಕೆ ಮಾಡಿರುವ ಶಿಫಾರಸುಗಳು.

1. ಈ ವಿಶ್ವದ ಎಲ್ಲಾ ಜನಾಂಗ ಹಾಗೂ ರಾಷ್ಟ್ರಗಳು ಅನುಭವಿಸುವ ಆರ್ಥಿಕ ಹಾಗೂ ಸಾಂಸ್ಕೃತಿಕ ಸ್ವಯಂನಿರ್ಧಾರದ ಹಕ್ಕು, ಈ ಪ್ರದೇಶದ ಸ್ಥಳೀಯ ಜನರಿಗೂ ಅನ್ವಯಿಸಬೇಕು.
2. ನಮ್ಮ ಪಾರಂಪರಿಕ ಪ್ರದೇಶಗಳ ರಕ್ಷಣೆ ಸಂಬಂಧದಲ್ಲಿ ಸ್ಥಳೀಯ ಜನರಿಗಿರುವ ಹಕ್ಕುಗಳನ್ನು ಭಾರತ ಸರ್ಕಾರ ಗುರುತಿಸಬೇಕು.
3. ಪರಿಣಾಮಕ್ಕೊಳಗಾಗುವ ಅಥವಾ ಪರಿಣಾಮಕ್ಕೊಳಗಾಗುವ ಸಾಧ್ಯತೆ ಇರುವ ಸ್ಥಳೀಯ ಸಮುದಾಯಗಳಿಂದಲೇ ಸಂಸ್ಕೃತಿ, ಪರಿಸರ ಹಾಗೂ ದೇಶೀ ಅರ್ಥ ವ್ಯವಸ್ಥೆಯ ಮೇಲೆ ಬೀರುವ ಪರಿಣಾಮದ ಅಪೇಕ್ಷಾರ್ಹತೆ ಕುರಿತು ನಿರ್ಧಾರವಾಗುವವರೆಗೆ ಎಲ್ಲಾ ಅಭಿವೃದ್ಧಿ ಮತ್ತು ವಾಣಿಜ್ಯ ಮಧ್ಯ ಪ್ರವೇಶಿಸುವಿಕೆ ಕ್ರಮಗಳ ವಿರುದ್ಧ ನಿಷೇಧ ಹೇರಬೇಕು.
4. ದೇಶೀ ಜ್ಞಾನ ವ್ಯವಸ್ಥೆ ಮತ್ತು ಸಂಸ್ಥೆಗಳನ್ನು ರಕ್ಷಿಸಿ ಪುನರುಜ್ಜೀವನಗೊಳಿಸಬೇಕು. ವಾಣಿಜ್ಯ ದುರ್ಬಳಕೆಯಿಂದ ಈ ಜ್ಞಾನ ವ್ಯವಸ್ಥೆಯನ್ನು ಶಾಸನಾತ್ಮಕವಾಗಿ ರಕ್ಷಿಸಬೇಕು.
5. ಮಾನವೀಯ ತಳಿ ಯೋಜನೆಗಳಿಗೆ ಸಂಬಂಧಿಸಿದ ಚಟುವಟಿಕೆಗಳಿಗೆ ಪೂರ್ಣ ನಿಯಂತ್ರಣ ಹೇರಬೇಕು.
6. ಈ ಪ್ರದೇಶಗಳಲ್ಲಿ ಪಾರಂಪರಿಕವಾಗಿ ವಾಸಿಸುತ್ತಿರುವ ಸ್ಥಳೀಯ ಸಮುದಾಯಗಳ ಸಮನ್ವಯದೊಂದಿಗೆ ಸರ್ಕಾರಿ ಹಾಗೂ ಸರ್ಕಾರೇತರ ಸಂಸ್ಥೆಗಳ ಗರಿಷ್ಠ ಪ್ರಯತ್ನಗಳ ಬೆಂಬಲದ ಜತೆ ಈ ಪ್ರದೇಶದ ಪರಿಸರ ವ್ಯವಸ್ಥೆ ಸಂರಕ್ಷಿಸುವ ಕಾರ್ಯ ನಡೆಯಬೇಕು.
7. ಶಿಕ್ಷಣದ ಸೂಕ್ತ ವ್ಯವಸ್ಥೆ ರೂಪಿಸಲು ಸ್ಥಳೀಯ ಜನರಿಂದ ಸಮಗ್ರ ಪ್ರಯತ್ನಗಳು ಆರಂಭವಾಗಬೇಕು.
8. ಸ್ಥಳೀಯ, ಅಂತರರಾಷ್ಟ್ರೀಯ ಹಾಗೂ ರಾಷ್ಟ್ರೀಯ ಸರ್ಕಾರಗಳ ಸಹಯೋಗದೊಂದಿಗೆ ನಮ್ಮ ಪರಿಸರ ವ್ಯವಸ್ಥೆಯ ರಕ್ಷಣೆ ಹಾಗೂ ಆಶೋತ್ತರಗಳ ಪ್ರಕಾರ ಈ ಪ್ರದೇಶದ ಸ್ಥಳೀಯ ಜನರ ಪಾಲುದಾರಿಕೆಯಲ್ಲಿ ಸುಸ್ಥಿರ ಅರ್ಥ ವ್ಯವಸ್ಥೆಯ ಅಭಿವೃದ್ಧಿಗಾಗಿ ಸೂಕ್ತ ಸಂಸ್ಥೆಗಳು ಹಾಗೂ ವ್ಯವಸ್ಥೆಗಳನ್ನು ರೂಪಿಸಬೇಕು.
9. ನಮ್ಮ ಜನರ ಆರ್ಥಿಕ ಹಾಗೂ ಸಾಮಾಜಿಕ ಬದುಕಿನಲ್ಲಿ ಲಿಂಗ ಸಮಾನತೆ ರೂಢಿಸಲು ನೆರವಾಗುವುದಕ್ಕಾಗಿ, ಮಹಿಳೆಯರು ಹಾಗೂ ಮಹಿಳಾ ಸಂಸ್ಥೆಗಳ ಪುನರುಜೀವನ ಮತ್ತು ಬಲವರ್ಧನೆ ಹಾಗೂ ಪಾರಂಪರಿಕ ಸಂಸ್ಥೆಗಳ ವಿಸ್ತರಣೆಗಾಗಿ ಸರ್ಕಾರ ಹಾಗೂ ಸರ್ಕಾರೇತರ ಸಂಸ್ಥೆಗಳು ವಿಶೇಷ ನೆರವು ನೀಡಬೇಕು.
10. ಸೂಕ್ತ ಕಾನೂನು ಅವಕಾಶಗಳೊಂದಿಗೆ ಶಿಕ್ಷಣದ ಹಕ್ಕು ಹಾಗೂ ನಮ್ಮದೇ ಭಾಷೆಗಳಲ್ಲಿ ಸಂವಹನ ಮಾಡುವ ಹಕ್ಕನ್ನು ಗುರುತಿಸಿ ಬೆಂಬಲಿಸಬೇಕು. ನಮ್ಮ ಭಾಷೆಗಳ ಮಾಧ್ಯಮ ಹಾಗೂ ನಮ್ಮದೇ ಭಾಷೆಗಳ ಅಭಿವೃದ್ಧಿಗೂ ಕ್ರಮಗಳನ್ನು ಕೈಗೊಳ್ಳಬೇಕು.
11. ಕಲೆ ಹಾಗೂ ಕರಕುಶಲ ಕಲೆಗಳ ಪುರಾತನ ಪರಂಪರೆಗೆ ನಮಗಿರುವ ಹಕ್ಕುಗಳನ್ನು ಗುರುತಿಸಬೇಕು. ನಮ್ಮ ಅಂಗೀಕಾರವಿಲ್ಲದೆ ನಮ್ಮ ಪರಂಪರೆಯನ್ನು ವಾಣಿಜ್ಯ ರೀತಿಯಲ್ಲಿ ದುರುಪಯೋಗ ಪಡಿಸಿಕೊಳ್ಳುವವರ ವಿರುದ್ಧ ಕ್ರಮಗಳನ್ನು ಕೈಗೊಳ್ಳಲು ಅವಕಾಶ ಇರಬೇಕು.

53. ಈಶಾನ್ಯ ಭಾರತದ ಸ್ಥಳೀಯ ಮಹಿಳೆಯರ ಜಂಟಿ ವೇದಿಕೆ, ಸ್ಥಳೀಯ ಜನರ ಮಂಡಲಿ ತನ್ನ ಹದಿನೈದನೇ ಅಧಿವೇಶನದಲ್ಲಿ ಸ್ಥಳೀಯ ಆರೋಗ್ಯ ಕುರಿತ ಸಮಿತಿಯ ರಚನೆಯನ್ನು ಶ್ಲಾಘಿಸುತ್ತದೆ. ಸ್ಥಳೀಯ ಮಹಿಳೆಯರ ಆರೋಗ್ಯಕ್ಕೆ ಸಂಬಂಧಿಸಿದ ಸಮಸ್ಯೆಗಳು ಜಗತ್ತಿನಲ್ಲಿ ನಿರ್ಲಕ್ಷ್ಯಕ್ಕೊಳಗಾದ ವಿಚಾರವಾಗಿದ್ದು ಪರಿಶೀಲನೆ ಹಾಗೂ ತುರ್ತು ಕ್ರಮಕ್ಕೆ ಅರ್ಹವಾದ ವಿಚಾರವೆಂದು ಮಾನವೀಯ ಹಕ್ಕುಗಳ ವಿಶ್ವಸಂಸ್ಥೆ ಆಯೋಗದ ಗಮನ ಸೆಳೆಯುತ್ತದೆ.

54. ಈಶಾನ್ಯ ಭಾರತದ ಸ್ಥಳೀಯ ಮಹಿಳೆಯರಿಗೆ ಮುಖ್ಯವಾದ ವಿಚಾರವೆಂದರೆ, ಅಘೋಷಿತ ತುರ್ತು ಪರಿಸ್ಥಿತಿ ಹಾಗೂ ಭಾರತೀಯ ಸರ್ಕಾರದೊಂದಿಗೆ ಕಡಿಮೆ ಪ್ರಮಾಣದ ಘರ್ಷಣೆಯ ಜತೆ ಜತೆಗೇ ತಲತಲಾಂತರದಿಂದ ಬದುಕುತ್ತಿರುವ ಸ್ಥಳೀಯ ಸಮುದಾಯಗಳ ಮಾನಸಿಕ ಸಾಮಾಜಿಕ ಆರೋಗ್ಯದ ಸ್ಥಿತಿ.

55. ಸರ್ಕಾರಿ ಸಂಸ್ಥೆಗಳಾದ ಮಿಲಿಟರಿ ಹಾಗೂ ಅರೆ ಮಿಲಿಟರಿ ಪಡೆಗಳಂತಹ ಸರ್ಕಾರಿ ಸಂಸ್ಥೆಗಳ ಜತೆ ಹಿಂಸಾತ್ಮಕ ಘರ್ಷಣೆಗಳ ನೇರ ಪರಿಣಾಮಗಳಲ್ಲಿ, ನಾಗರಿಕರಾಗಿ ಹತ್ಯೆಗಳು, ಹಿಂಸೆ, ಅಘೋಷಿತ ಬಂಧನ, ಅತ್ಯಾಚಾರ ಇತ್ಯಾದಿಗಳಲ್ಲದೆ, ಈ ಸತತ ಹಿಂಸೆಯ ಪರಿಣಾಮಗಳು ನಮ್ಮ ಸಮುದಾಯಗಳಲ್ಲಿ ಹೆಚ್ಚು ಅಗೋಚರವಾಗಿವೆ. ನಮ್ಮ ಸಮುದಾಯಗಳಲ್ಲಿ ವಿಶೇಷವಾಗಿ ಯುವಜನರು ಹಾಗೂ ಮಹಿಳೆಯರಲ್ಲಿ ಆತ್ಮಹತ್ಯೆ ಪ್ರಕರಣಗಳು ಹೆಚ್ಚುತ್ತಿವೆ. ಇದನ್ನು ಯಾರು ಗುರುತಿಸಿಲ್ಲ ಅಥವಾ ದಾಖಲುಗೊಳಿಸಿಲ್ಲ. ಅಲ್ಲದೆ ಭೀತಿ-ಹೆದರಿಕೆಗಳ ಮನೋವಿಕಾರಗಳಿಗೆ ಈಡಾಗುವ ಸಾಧ್ಯತೆಗಳೂ ಹೆಚ್ಚಾಗಿರುವುದು ನಮ್ಮ ಸಮುದಾಯಗಳ ಆರಂಭದ ಅಧ್ಯಯನಗಳಲ್ಲಿ ವ್ಯಕ್ತವಾಗಿವೆ. ಹೆಚ್ಚಿನ ರಕ್ತದೊತ್ತಡ, ಅಲ್ಸರ್‌ಗಳು, ಹೆಚ್ಚಿನ ಅಸಿಡಿಟಿ, ಮಹಿಳೆಯರಲ್ಲಿ ಮುಟ್ಟಿನ ಅನಿಯಮಿತತೆ, ಗರ್ಭಧಾರಣೆಯ ಸಮಸ್ಯೆಗಳು ಇತ್ಯಾದಿ ವ್ಯಕ್ತವಾಗಿವೆ.

56. ಸ್ಥಳೀಯ ಪರಿಸರ ನಿರ್ವಹಣಾ ವ್ಯವಸ್ಥೆಯ ನಿರ್ಲಕ್ಷ್ಯ ಹಾಗೂ ಸರ್ಕಾರ ಅಥವಾ ಖಾಸಗಿ ಕೈಗಾರಿಕಾ ಸಂಸ್ಥೆಗಳ ಮಾಲಿನ್ಯಕಾರಿ ಅಭಿವೃದ್ಧಿ ಚಟುವಟಿಕೆಗಳಿಂದ ನಮ್ಮ ಪರಿಸರ ವ್ಯವಸ್ಥೆ ಹದಗೆಟ್ಟಿರುವುದರಿಂದ, ಪೌಷ್ಟಿಕತೆಗೆ ಸಂಬಂಧಿಸಿದ ಸಮಸ್ಯೆಗಳು ತೀವ್ರವಾಗಿದೆ. ನಮ್ಮ ಪಾರಂಪರಿಕ ಆಹಾರಗಳು ಲಭ್ಯವಿಲ್ಲ. ಅಥವಾ ಅದನ್ನು ಕೊಳ್ಳಬೇಕೆಂದರೆ ಕೈಗೆಟುಕದಂತಹ ಬೆಲೆ. ಸ್ಥಳೀಯ ಔಷಧೀಯ ಸಸ್ಯಗಳೂ ವಿನಾಶದ ಅಂಚಿನಲ್ಲಿವೆ. ಜಲಸಂಪನ್ಮೂಲಗಳೂ ಕೃಷಿ ಮತ್ತು ಕೈಗಾರಿಕೆಯಿಂದ ಬರುವ ರಾಸಾಯನಿಕ ತ್ಯಾಜ್ಯ ವಸ್ತುಗಳ ಕಲಬೆರಕೆಯಿಂದ ಹಾಳಾಗಿವೆ. ಕಲುಷಿತವಲ್ಲದ ನೀರು ದೊರೆಯುವುದೇ ಕಷ್ಟವಾಗಿದೆ. ಕಾಲರಾ, ಟೈಫಾಯಿಡ್, ಜ್ವರ, ಚರ್ಮ ಸಂಬಂಧಿ ಕಾಯಿಲೆಗಳು ಇತ್ಯಾದಿ ನೀರಿಗೆ ಸಂಬಂಧಿಸಿದ ಸಮಸ್ಯೆಗಳು ತೀವ್ರವಾಗಿವೆ. ಈ ಭಾಗದಲ್ಲಿ ಮಲೇರಿಯಾದ ಮರು-ಉದಯವನ್ನು ಚೆನ್ನಾಗಿ ದಾಖಲಿಸಲಾಗಿದೆ. ಆದರೆ ನಮ್ಮ ಜನರೊಂದಿಗೆ ಸಮಾಲೋಚಿಸಿ ಈ ಸಮಸ್ಯೆ ಪರಿಹಾರಕ್ಕೆ ಹೆಚ್ಚಿನ ಕ್ರಮಗಳನ್ನು ಕೈಗೊಂಡಿಲ್ಲ. ಹಿರಿಯರಲ್ಲಿ ಸಕ್ಕರೆ ಕಾಯಿಲೆಯ ಸಮಸ್ಯೆ ತೀವ್ರತರವಾಗಿ ಹಬ್ಬುತ್ತಿದೆ. ಆದರೆ ಈ ಬಗ್ಗೆ ಹೆಚ್ಚಿನ ದಾಖಲೆಗಳನ್ನು ಮಾಡಿಲ್ಲ. ಅಲ್ಲದೆ, ಈ ಸಂಬಂಧದಲ್ಲಿ ಹೆಚ್ಚಿನ ಆರೋಗ್ಯ ಸೇವಾ ಸೌಲಭ್ಯಗಳೂ ಸೃಷ್ಟಿಯಾಗಿಲ್ಲ. ಮಕ್ಕಳನ್ನು ಹೆರುವಂತಹವರಾಗಿ ಹಾಗೂ ಸಾಕುವವರಾಗಿ ಈ ಸಮಸ್ಯೆಗಳು ಮಹಿಳೆಯರಿಗೆ ಹೆಚ್ಚು ಮುಖ್ಯವಾಗುತ್ತವೆ.

57. ಸ್ಥಳೀಯ ಮಹಿಳೆಯರ ಆರೋಗ್ಯಕ್ಕೆ ಸಂಬಂಧಿಸಿದಂತೆ ಹೆಚ್ಚು ನಿರ್ಲಕ್ಷ್ಯಕ್ಕೆ ಗುರಿಯಾಗಿರುವ ಮತ್ತೊಂದು ಕ್ಷೇತ್ರವೆಂದರೆ ಕಾರ್ಮಿಕರು ಮತ್ತು ಉದ್ಯೋಗ ಕ್ಷೇತ್ರಕ್ಕೆ ಸಂಬಂಧಿಸಿದ ಆರೋಗ್ಯ ಸಮಸ್ಯೆಗಳು. ಆರ್ಥಿಕವಾಗಿ ಉತ್ಪಾದಕ ಶ್ರಮ ಕ್ಷೇತ್ರಗಳಲ್ಲಿ ಸ್ಥಳೀಯ ಮಹಿಳೆಯರು ಕೆಲಸ ಮಾಡುತ್ತಾರೆ. ದುರದೃಷ್ಟವಶಾತ್ ತಯಾರಕರಿಂದ ಉದಾಹರಣೆಗೆ (ಕೀಟನಾಶಕ ಅಥವಾ ರಸಗೊಬ್ಬರಗಳ ಬಳಕೆ) ನಮ್ಮ ಉತ್ಪಾದನಾ ವಸ್ತುಗಳ ಬಳಕೆಯ ಬಗ್ಗೆ ಹೆಚ್ಚಿನ ಮಾಹಿತಿಗಳು ಇಲ್ಲದಿರುವುದರಿಂದ, ಹಾನಿಕಾರಕ ಪರಿಣಾಮಗಳ ಬಗ್ಗೆ ಮಹಿಳೆಯರಿಗೆ ಯಾವುದೇ ಮಾಹಿತಿ ಇರುವುದಿಲ್ಲ. ಸಾಂಸ್ಕೃತಿಕವಾಗಿ ಸೂಕ್ಷ್ಮವಾದ ಸಮುದಾಯ ಆರೋಗ್ಯ ಶಿಕ್ಷಣ ಹಾಗೂ ಆರೋಗ್ಯ ವರ್ಧನೆ ಚಟುವಟಿಕೆಗಳು ಇಲ್ಲವೇ ಇಲ್ಲ. ಈ ವಸ್ತುಗಳ ಅರಕ್ಷಿತ ಬಳಕೆಯಿಂದ ಆಗುವ ಸಾಮಾನ್ಯ ಆರೋಗ್ಯ ಸಮಸ್ಯೆಗಳಲ್ಲದೆ, ಮಹಿಳೆಯರ ಸಂತಾನಾಭಿವೃದ್ಧಿ ಆರೋಗ್ಯಕ್ಕೂ ಹಾನಿ ಆಗಲಿದೆ. ಇದಕ್ಕೆ ಹೆಚ್ಚಿನ ಗಮನ ನೀಡಲಾಗುತ್ತಿಲ್ಲ. ಇದೇ ರೀತಿ, ಸರಕು ಒಯ್ಯುವ ಹಾಗೂ ಸರಕುಗಳ ಸಾಗಣೆ ಕಾರ್ಯವನ್ನು ಸಾಂಪ್ರದಾಯಿಕವಾಗಿ ಮಹಿಳೆಯರೇ ನಿರ್ವಹಿಸುವುದರಿಂದ, ಈ ಕಾರ್ಯಕ್ಕೆ ಹೆಚ್ಚು ಹೆಚ್ಚು ದೂರವನ್ನು ಕ್ರಮಿಸಬೇಕಾಗಿರುವುದರಿಂದ (ಉದಾಹರಣೆಗೆ ತರಕಾರಿ ಸಂಗ್ರಹ, ಮೀನುಗಾರಿಕೆ ಮತ್ತು ನೀರು ಸಂಗ್ರಹ), ಮಹಿಳೆಯರ ಆರೋಗ್ಯದ ಮೇಲೆ ಹಾನಿಕಾರಕ ಪರಿಣಾಮಗಳು ಆಗುತ್ತಿವೆ.

58. ವಿಶ್ವದಾದ್ಯಂತ ಹರಡಿರುವ ಎಚ್‌ಐವಿ/ಏಡ್ಸ್ ಸಮಸ್ಯೆಗಳು ನಮ್ಮ ಆರೋಗ್ಯಕ್ಕೆ ತೀವ್ರ ಹಾನಿ ಮಾಡಿವೆ. ದಕ್ಷಿಣ ಏಷ್ಯಾದಲ್ಲಿ ಏಡ್ಸ್ ಕಾಯಿಲೆಯ ಕೇಂದ್ರವಾಗಿ ಮಣಿಪುರವನ್ನು ಗುರುತಿಸಲಾಗಿದೆ. ಇದರೊಂದಿಗೆ ಇಲ್ಲಿ ಯಾವಾಗಲೂ ಸರಿಯಾದ ನಿಯಂತ್ರಣಕ್ಕೆ ಒಳಪಟ್ಟಿಲ್ಲದ ಕ್ಷಯ ರೋಗವೂ ಹೆಚ್ಚುತ್ತಿದೆ.

59. ಸ್ಥಳೀಯ ಆರೋಗ್ಯ ಸಮಿತಿ 1997ರ ಸೆಪ್ಟೆಂಬರ್‌ನ ತನ್ನ ವರದಿಯಲ್ಲಿ ಹೇಳಿರುವ ಪ್ರಕಾರ, ವಿಷಕಾರಿ ತ್ಯಾಜ್ಯ ವಸ್ತುಗಳು ಹಾಗೂ ಗಣಿಗಾರಿಕೆಯ ತ್ಯಾಜ್ಯ ವಸ್ತುಗಳೂ ನಮ್ಮ ಭೂ ಪ್ರದೇಶ ಹಾಗೂ ಜಲ ಮೂಲಗಳನ್ನು ಮಲಿನಗೊಳಿಸಿವೆ. ಇವೂ ಸಹ ಮಹಿಳೆಯರ ಸಂತಾನಾಭಿವೃದ್ಧಿ ಸಾಮರ್ಥ್ಯ ಹಾಗೂ ಆರೋಗ್ಯಕ್ಕೆ ಹಾನಿ ಸೇರಿದಂತೆ ತೀವ್ರತರ ಸಾರ್ವಜನಿಕ ಆರೋಗ್ಯ ಸಮಸ್ಯೆಯನ್ನು ಸೃಷ್ಟಿಸುತ್ತಿದೆ.

60. ದೇಶೀ ಆರೋಗ್ಯ ಜ್ಞಾನ ವ್ಯವಸ್ಥೆಯ ವಿನಾಶ ಈ ಸಮಸ್ಯೆ ಹೆಚ್ಚಾಗಲು ಕಾರಣವಾಗಿದೆ. ಪಿತೃಪ್ರಧಾನ ಅಂಶಗಳನ್ನು ಹೊಂದಿರುವ ಸರ್ಕಾರದ ಆರೋಗ್ಯ ವ್ಯವಸ್ಥೆಗಳೂ, ನಿರಂತರವಾಗಿ ಪಾರಂಪರಿಕ ಮಹಿಳಾ ಆರೋಗ್ಯ ಆಚರಣೆಗಳನ್ನು ನಾಶಗೊಳಿಸುತ್ತಿದೆ.

61. ಆಧ್ಯಾತ್ಮಿಕ ಆರೋಗ್ಯ ಸಮಸ್ಯೆಯೂ ನಮ್ಮ ಜನರ ಮತ್ತೊಂದು ಪ್ರಮುಖ ಕಾಳಜಿಯಾಗಿದೆ. ನಮ್ಮ ಸಂಸ್ಕೃತಿಯ ರಕ್ಷಕರಾಗಿ ಹಾಗೂ ಅನೇಕ ಸಂದರ್ಭಗಳಲ್ಲಿ ಆರೋಗ್ಯಪಾಲಕರಾಗಿ ನಮ್ಮ ಜನರು ಆಧ್ಯಾತ್ಮಿಕ ಆರೋಗ್ಯ ಕಾಪಾಡುವ ಹೊಣೆಯನ್ನು ಹೊರುತ್ತಾರೆ. ದುಃಖದ ಸಂಗತಿಯೆಂದರೆ, ಬದುಕಿನ ಈ ಆಯಾಮವನ್ನು ಪೂರ್ಣ ನಿರ್ಲಕ್ಷಿಸಲಾಗಿದ್ದು, ವ್ಯಾಪಕ ಆರೋಗ್ಯ ಸಮಸ್ಯೆಗಳಿಗೆ ಕಾರಣವಾಗಿದೆ.

62. ಆರನೇ ರಾಷ್ಟ್ರೀಯ ಮಹಿಳಾ ಚಳುವಳಿಗಳ ಸಮ್ಮೇಳನಕ್ಕೆ ಈ ಕೆಳಕಂಡ ಶಿಫಾರಸುಗಳನ್ನು ಮಾಡಲು ಈಶಾನ್ಯ ಭಾರತದ ಸ್ಥಳೀಯ ಮಹಿಳೆಯರ ಜಂಟಿ ವೇದಿಕೆ ಬಯಸುತ್ತದೆ.

1. ನಮ್ಮ ಸಮುದಾಯಗಳು ಎಷ್ಟು ಅಲ್ಪಸಂಖ್ಯಾತವಾಗಿವೆಯೆಂದರೆ ಅನೇಕ ಸಮುದಾಯಗಳು ವಿನಾಶದ ಭೀತಿಯನ್ನೇ ಎದುರಿಸುತ್ತಿರುವ ಈ ಸಂದರ್ಭದಲ್ಲಿ ಸ್ಥಳೀಯ ಮಹಿಳೆಯರ ತೀವ್ರತರ ಆರೋಗ್ಯ ಸಮಸ್ಯೆಗಳಿಗೆ ಹೆಚ್ಚಿನ ಗಮನ ನೀಡಬೇಕು.

2. ನಮ್ಮ ಪ್ರದೇಶಗಳಲ್ಲಿ ಸರ್ಕಾರದ ಜತೆಗಿನ ಕಡಿಮೆ ತೀವ್ರತೆಯ ಘರ್ಷಣೆಗಳ ಪರಿಣಾಮಗಳನ್ನು ಗುರುತಿಸಿ ಮಾನವೀಯ ತತ್ವಗಳನ್ನು ಅನ್ವಯಿಸಬೇಕು.

3. ಸೂಕ್ತ ಆರೋಗ್ಯ ನೀತಿಯೊಂದಿಗೆ ಪರ್ಯಾಯ ಹಾಗೂ ದೇಶೀ ಆರೋಗ್ಯ ವ್ಯವಸ್ಥೆ ಮತ್ತು ಆಚರಣೆಗಳನ್ನು ಒಳಗೊಂಡಂತಹ ಸಮಾನ ಹಾಗೂ ಎಲ್ಲರಿಗೂ ನಿಲುಕುವ ಆರೋಗ್ಯ ಸೇವೆಗಳನ್ನು ತುರ್ತಾಗಿ ಆರಂಭಿಸಬೇಕು.

4. ನಮ್ಮ ಸಂಸ್ಕೃತಿ ಮತ್ತು ಆಚರಣೆಗಳನ್ನು ಮನಸ್ಸಿನಲ್ಲಿಟ್ಟುಕೊಂಡೇ ನಮ್ಮ ಮಹಿಳೆಯರು ಮತ್ತು ಮಕ್ಕಳಿಗೆ ಸೂಕ್ತ ಸಮುದಾಯ ಆಧಾರಿತ ಮಾನಸಿಕ-ಸಾಮಾಜಿಕ ಆರೋಗ್ಯ ಪೂರಕ ವ್ಯವಸ್ಥೆಗಳ ಅಭಿವೃದ್ಧಿಗೆ ವಿಶೇಷ ಕ್ರಮಗಳನ್ನು ಕೈಗೊಳ್ಳಬೇಕು.

5. ನಮ್ಮ ಪಾರಂಪರಿಕ ಪ್ರದೇಶಗಳಲ್ಲಿ ಪರಿಸರ ದೃಷ್ಟಿಯಿಂದ ಹಾನಿಕರ ಹಾಗೂ ಮಾಲಿನ್ಯಕಾರಿ ಚಟುವಟಿಕೆಗಳ ಮೇಲೆ ಯಾವುದೇ ವಿಳಂಬವಿಲ್ಲದೆ ನಿಷೇಧ ಹೇರಬೇಕು. ನಮ್ಮ ಆರೋಗ್ಯದ ಮೇಲೆ ಹಿಂದಿನ ಎಲ್ಲಾ ಚಟುವಟಿಕೆಗಳ ಪರಿಣಾಮವನ್ನು ತೀರ್ಮಾನಿಸಬೇಕು. ಅಲ್ಲದೆ ಈ ಹಾನಿಗೆ ಪರಿಹಾರವಾಗಿ ಸೂಕ್ತ ಕ್ರಮಗಳನ್ನು ಸರ್ಕಾರ ಕೈಗೊಳ್ಳಬೇಕು.

6. ನಮ್ಮ ಸ್ಥಳೀಯ ಜ್ಞಾನ ವ್ಯವಸ್ಥೆ ಮತ್ತು ಜೈವಿಕ ವೈವಿಧ್ಯವನ್ನು ಗುರುತಿಸಿ, ವಾಣಿಜ್ಯ ಹಿತಾಸಕ್ತಿಗಳ ಶೋಷಣೆಯಿಂದ ಇವನ್ನು ಸಂರಕ್ಷಿಸಬೇಕು.

7. ಆರನೇ ರಾಷ್ಟ್ರೀಯ ಮಹಿಳಾ ಚಳುವಳಿಗಳ ಸಮ್ಮೇಳನದ ಪ್ರತಿನಿಧಿಗಳು, ಸ್ಥಳೀಯ ಜನರ ಆರೋಗ್ಯದ ಬಗ್ಗೆ ಸ್ಥಳೀಯ ಆರೋಗ್ಯ ಸಮಿತಿಯ ಉದ್ದೇಶ, ಕಾರ್ಯಕ್ರಮಗಳು ಹಾಗೂ ನಿಲುವಿಗೆ ಬೆಂಬಲವನ್ನು ವ್ಯಕ್ತಪಡಿಸಬೇಕು.

# ಅವರ ಪರಾಕ್ರಮಕ್ಕೆ ನಮ್ಮ ಮನಸಂಕಲ್ಪವೇ ಉತ್ತರ

*ಸ್ವತಂತ್ರ ರಾಜ್ಯವಾಗಿದ್ದ ಟಿಬೆಟ್ 1949ರಲ್ಲಿ ಚೀನಾದ ಪೀಪಲ್ಸ್ ಲಿಬರೇಷನ್ ಆರ್ಮಿಯ ಆಕ್ರಮಣಕ್ಕೊಳಗಾಯಿತು. ಚೀನಾ ಕಮ್ಯುನಿಸ್ಟರು ಸಾವಿರಾರು ಮಿಲಿಟರಿ ತುಕಡಿಗಳ ಸಹಾಯದಿಂದ ಟಿಬೆಟನ್ನು ತನ್ನ ಹಿಡಿತದಲ್ಲಿಟ್ಟುಕೊಂಡು ಅಂತರರಾಷ್ಟ್ರೀಯ ಕಾನೂನು ಮತ್ತು ಟಿಬೆಟಿನ ಜನರ ಮೂಲಭೂತ ಹಕ್ಕುಗಳಾದ ಸ್ವಾತಂತ್ರ್ಯ, ಸ್ವಾಯತ್ತತೆಯನ್ನು ಹತ್ತಿಕ್ಕಿದೆ. ಟಿಬೆಟಿನಲ್ಲಿ ಉ-ತ್ಸಾಂಗ್, ಖಾಮ್, ಅಮ್‌ಡೊ ಎಂಬ ಮೂರು ಪ್ರಾಂತ್ಯಗಳಿವೆ. ಆಕ್ರಮಣದ ನಂತರ ಚೀನಾ ಟಿಬೆಟನ್ನು ತುಂಡು ತುಂಡಾಗಿ ಛಿದ್ರಗೊಳಿಸಿದೆ. ಚೀನಾ ಕರೆದುಕೊಳ್ಳುವ ಸ್ವಾಯತ್ತ ಟಿಬೆಟಿನ ವಲಯ (Tibet autonomous Region) ಒಟ್ಟಾರೆ 2.5 ಮಿಲಿಯನ್ ಚದುರ ಕಿ.ಮೀ.ನಲ್ಲಿ 1.2 ಮಿಲಿಯನ್ ಚದರ ಕಿ.ಮೀ.ಯನ್ನು ಒಳಗೊಂಡಿದೆ. ಸುಮಾರು 1/3ರಷ್ಟು ಜನಸಂಖ್ಯೆ ಈ ಪ್ರದೇಶದಲ್ಲಿದ್ದಾರೆ. ಉಳಿದ 2/3 ರಷ್ಟು ಟಿಬೆಟಿಯನ್ನರು ಖಾಮ್ ಹಾಗೂ ಆಮ್‌ಡೊನ ಪೂರ್ವ, ಉತ್ತರ ಪೂರ್ವ ಪ್ರಾಂತ್ಯದಲ್ಲಿದ್ದಾರೆ. ಆಮ್‌ಡೊದ ಹೆಚ್ಚಿನ ಪ್ರದೇಶ ಖಾಮ್‌ನ ಸ್ವಲ್ಪ ಪ್ರದೇಶ ಕಿಂಗ್‌ಯ್ ಪ್ರಾಂತ್ಯಕ್ಕೆ ಸೇರಿದರೆ ಆಮ್‌ಡೋದ ಉಳಿದ ಪ್ರದೇಶ ಹಾಗು ಖಾಮ್‌ನ ಹೆಚ್ಚಿನ ಪ್ರದೇಶ, ಚೀನಾದ ಗಾನ್ಸು, ಸಿಚುಅನ್, ಯುನನ್ ಪ್ರಾಂತ್ಯಕ್ಕೆ ಸೇರುತ್ತದೆ. ಆಡಳಿತದಲ್ಲಿ ಹೆಚ್ಚಿನ ಅಧಿಕಾರ ಟಿಬೆಟಿಯನ್ನರಿಗಿಲ್ಲ. ಮಿಲಿಟರಿ ಮತ್ತು ಆಡಳಿತ ಅಧಿಕಾರಿಗಳ ಮೂಲಕ ಎಲ್ಲಾ ನಿರ್ಧಾರಗಳನ್ನು ಬೀಜಿಂಗ್‌ನಲ್ಲೆ ತೆಗೆದುಕೊಳ್ಳಲಾಗುತ್ತದೆ. TAR ಅನ್ನು ಸ್ವತಂತ್ರ್ಯವೆಂದು ಕರೆದರೂ ಅದು ಕಾರ್ಯರೂಪದಲ್ಲಿಲ್ಲ. ಚೀನಾದ ಕಮ್ಯೂನಿಸ್ಟ್ ಪಾರ್ಟಿಯೇ ನಿರ್ಧರಿಸುವ ಅಧಿಕಾರವನ್ನು ಹೊಂದಿದ್ದು, ಪ್ರಾಂತೀಯ ಕಾರ್ಯದರ್ಶಿಯ ಮೂಲಕ ಅಧಿಕಾರವನ್ನು ಚಲಾಯಿಸುತ್ತಿದೆ. ಅವನ ಅಡಿಯಲ್ಲಿನ ಅಧಿಕಾರಿಗಳು ಆಡಳಿತದ ಕೆಲವು ಸ್ತರಗಳಲ್ಲಿ ಕೆಲಸ ಮಾಡುವ ಟಿಬೆಟಿಯನ್ನರ ಮೇಲೆ ಅಧಿಕಾರ ಚಲಾಯಿಸುತ್ತಾರೆ. TAR ಸರ್ಕಾರದಲ್ಲಿ ಕೆಲವೆ ಕೆಲವು ಮಂದಿ ಟಿಬೆಟಿಯನ್ನರು ಉನ್ನತ ಹುದ್ದೆಯಲ್ಲಿದ್ದಾರೆ. ಬಹಳಷ್ಟು ಇಲಾಖೆಗಳಲ್ಲಿ ಟಿಬೆಟಿಯನ್ನರಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ಚೀನಿಯರಿದ್ದಾರೆ. ಚೀನಾದ ಆಕ್ರಮಣದಿಂದಾಗಿ 1.2 ಮಿಲಿಯನ್‌ಗಿಂತಲೂ ಹೆಚ್ಚಿನ ಟಿಬೆಟಿಯನ್ನರು ಸತ್ತಿದ್ದಾರೆ. 6,000ಕ್ಕೂ ಹೆಚ್ಚಿನ ಧಾರ್ಮಿಕ, ಸಾಂಸ್ಕೃತಿಕ ಕೇಂದ್ರಗಳನ್ನು ನಾಶಪಡಿಸಲಾಗಿದೆ. 1959ರಲ್ಲಿ ಟಿಬೆಟಿನ ಧಾರ್ಮಿಕ, ರಾಜಕೀಯ ನಾಯಕ ದಲೈಲಾಮರೊಂದಿಗೆ ಸುಮಾರು 8,000 ಟಿಬೆಟಿನ ನಿರಾಶ್ರಿತರು ದೇಶ ಬಿಟ್ಟು ಭಾರತ, ನೇಪಾಳ, ಭೂತಾನ್‌ಗಳಲ್ಲಿ ಆಶ್ರಯ ಪಡೆದಿದ್ದಾರೆ.*

*ಚೀನಾದ ದಬ್ಬಾಳಿಕೆಯನ್ನು ವಿರೋಧಿಸಿ 1987ರಿಂದ 1995ರವರೆಗೆ ಸುಮಾರು 200 ಪ್ರತಿಭಟನೆಗಳು ನಡೆದಿವೆ. ಚೀನಾ ಸರ್ಕಾರ ಹೋರಾಟವನ್ನು ಹತ್ತಿಕ್ಕಲು ಸರ್ವ ಪ್ರಯತ್ನವನ್ನು ನಡೆಸಿದೆ. ಶಾಂತಿಯುತ ಸಂಧಾನದ ಮೂಲಕ ಒಪ್ಪಂದಕ್ಕೆ ಬರಲು ಟಿಬೆಟಿನ ರಾಜಕೀಯ ಧಾರ್ಮಿಕ ನಾಯಕ ದಲೈಲಾಮ ಅವರು ಪ್ರಯತ್ನಿಸುತ್ತಿದ್ದಾರೆ. ಜೊತೆಗೆ ಟಿಬೆಟಿನ ಸ್ವಾತಂತ್ರ್ಯಕ್ಕಾಗಿ ನಡೆಸಿರುವ ಹೋರಾಟದಲ್ಲಿ ಮಹಿಳೆಯರು ಸಕ್ರೀಯವಾಗಿ ಪಾಲ್ಗೊಂಡಿದ್ದಾರೆ. ಹೋರಾಟದ ಮುಂದಾಳತ್ವ ವಹಿಸಿದ್ದಾರೆ. ಬಂದೂಕು ಹಿಡಿಯದೆ ಶಾಂತಿಯುತವಾಗಿ ಆದರೆ ತೀವ್ರವಾಗಿ ನಿರಂಕುಶವಾದಿಗಳ ವಿರುದ್ಧ ದನಿ ಎತ್ತಿದ್ದಾರೆ. ಹೋರಾಟದಲ್ಲಿ ತೊಡಗಿಸಿಕೊಂಡಿರುವ ಮಹಿಳೆಯರ ಕೆಲವು ಅನುಭವಗಳನ್ನು ಮಾನಸ ಓದುಗರಿಗಾಗಿ ಪ್ರಕಟಿಸುತ್ತಿದ್ದೇವೆ.*

ತಾವರೆಯ ಗಮ್ಮಲಿಗೆ
ಸೂರ್ಯ ಗ್ರಹಣ ಹಿಡಿದರೇನು?
ದುಂಬಿಗಳು ದೂರ ಹೋದಾವೆ
ಅದರ ಸಿಹಿಯಿಂದ
ನನ್ನ ದೇಶ ಮಾರಾಟವಾಗಿಲ್ಲ
ಕಳುವಾಗಿದೆ
ಸತ್ಯವನ್ನು ಬಿಳಿ ಹಾಳೆಯ ಮೇಲೆ
ಬರೆದು ಕಳಿಸಿದ್ದೇವೆ.
ತಂದೆ-ತಾಯಂದರೇ
ನಿರಾಶರಾಗದಿರಿ
ಮತ್ತೊಮ್ಮೆ ಒಂದಾಗುವ ಗಳಿಗೆ ಬಂದೇ ಬರುವುದು.

ಹೀಗೆಂದು ಬಿಡುಗಡೆಯ ಹಾಡ ಹಾಡಿದವರು ಬಂಧಿಖಾನೆಯ ಬಂಧಿಗಳಾದ 14 ಜನ ಬೌದ್ಧ ಸನ್ಯಾಸಿನಿಯರು. ಇವರ ಮೇಲಿನ ಅಪರಾಧವೆಂದರೆ ಸ್ವಾತಂತ್ರ್ಯಕ್ಕಾಗಿ ನಡೆದ ಮೆರವಣಿಗೆಯಲ್ಲಿ ಭಾಗವಹಿಸಿದ್ದು. 1989 ಮತ್ತು 1990ರಲ್ಲಿ ಸ್ವಾತಂತ್ರ್ಯ ಟಿಬೇಟ್‌ಗಾಗಿ ನಡೆದ ಮೆರವಣಿಗೆಯದು. ಅದಕ್ಕಾಗಿ ಮೂರರಿಂದ ಒಂಭತ್ತು ವರ್ಷಗಳ ಜೈಲು ಶಿಕ್ಷೆಯನ್ನು ಅವರಿಗೆ ವಿಧಿಸಲಾಗಿತ್ತು. ಬಂಧೀಖಾನೆಯಲ್ಲಿ ಸ್ವಾತಂತ್ರ್ಯದ ಪರವಾಗಿ ಹಾಡು ಹಾಡಿದ್ದಕ್ಕೆ ಶಿಕ್ಷೆಯ ಅವಧಿಯನ್ನು ಹೆಚ್ಚಿಸಲಾಗಿದೆ. ಪುಂಟ್‌ಸಾಗ್ ನೈಡ್ರಾನ್ ಎಂಬ ಸನ್ಯಾಸಿನಿಗೆ ಶಿಕ್ಷೆಯನ್ನು 17 ವರ್ಷಗಳಿಗೆ ಹೆಚ್ಚಿಸಲಾಗಿದೆ. ಈಕೆ ಮಿಚುಂಗ್ರಿಯಲ್ಲಿನ

ಸನ್ಯಾಸಿನಿಯರ ಆಶ್ರಮದವರು. ಶಿಕ್ಷಾವಧಿಯನ್ನು ಹೆಚ್ಚಿಸಿದ್ದರ ಕಾರಣವೆಂದರೆ - ಆಕೆ ಆಶ್ರಮದ ಸ್ಟೋರ್ ಕೀಪರ್ ಆದ್ದರಿಂದ ಅರೆ-ಸರ್ಕಾರಿ ನೌಕರಳಾಗುತ್ತಾಳೆಂದು.

ಈ 14 ಜನ ಸನ್ಯಾಸಿನಿಯರಲ್ಲಿ ಅತಿ ಹೆಚ್ಚಿನ ಶಿಕ್ಷಾವಧಿ ವಿಧಿಸಿರುವುದು ಟೆನ್‌ಬೆನ್ ಥೂಬ್‌ಟೆನ್ ಎಂಬ 20 ವರ್ಷದ ಸನ್ಯಾಸಿನಿಗೆ. ಮೊದಲು ವಿಧಿಸಿದ್ದ 5 ವರ್ಷದ ಶಿಕ್ಷೆಯನ್ನು 14 ವರ್ಷಗಳಿಗೆ ಹೆಚ್ಚಿಸಿದ್ದಾರೆ. ಹೆಚ್ಚೂ ಕಡಿಮೆ ಮೂರು ಪಟ್ಟು ಹೆಚ್ಚಿಸಿದ್ದಾರೆ. ಗರು ಪ್ರದೇಶಕ್ಕೆ ಸೇರಿದ 22 ವರ್ಷದ ಗ್ಯಾಲ್ಟ್‌ಸೆನ್ ಡ್ರೊಲ್ಕರ್ ಮತ್ತು 19 ವರ್ಷದ ಗ್ವೆವಾಂಗ್ ಸ್ಯಾಂಗ್ ಡ್ರಾಲ್ ಎಂಬ ಇಬ್ಬರಿಗೆ ಕ್ರಮವಾಗಿ 4 ವರ್ಷಗಳಿಂದ 12 ವರ್ಷಗಳಿಗೆ, 3 ವರ್ಷಗಳಿಂದ 9 ವರ್ಷಗಳಿಗೆ ಹೆಚ್ಚಿಸಿದ್ದಾರೆ. ಉಳಿದ ಎಂಟು ಜನ ಸನ್ಯಾಸಿನಿಯರಾದ - 22 ವರ್ಷದ ಗ್ವೆವಾಂಗ್ ಚೆಯೊಜ್ವಾಮ್, 21 ವರ್ಷ ವಯಸ್ಸಿನ ಗ್ಯಾಲ್ಟ್‌ಸೆನ್ ಚೆಯೊಜ್ವಾಮ್, 23 ವರ್ಷ ವಯಸ್ಸಿನ ಲೂಹನ್‌ಡ್ರಪ್ ಜ್ಯಾಂಗ್‌ಮೊ, 23 ವರ್ಷ ವಯಸ್ಸಿನ ಗ್ವೆವಾಂಗ್ ಚೊಯ್‌ಕಿ, 19 ವರ್ಷ ವಯಸ್ಸಿನ ಗ್ವೆವಾಂಗ್ ಛೊಸೆ, 21 ವರ್ಷ ವಯಸ್ಸಿನ ಗ್ವೆವಾಂಗ್ ಟ್ರಾಮ್‌ಡ್ರೊಲ್, 19 ವರ್ಷ ವಯಸ್ಸಿನ ಪಾಲ್ಡೆನ್ ಚೊಯ್‌ಡ್ರಾನ್, 28 ವರ್ಷ ವಯಸ್ಸಿನ ನಾಮ್‌ಡ್ರೊಲ್ ಅವರುಗಳಿಗೆ ಶಿಕ್ಷೆಯನ್ನು ದುಪ್ಪಟ್ಟು ಮಾಡಲಾಗಿದೆ. ಉಳಿದಿಬ್ಬರು - 20 ವರ್ಷ ವಯಸ್ಸಿನ ರಿಗ್‌ಜಿನ್ ಚಿಯೋಕಿ, 23 ವರ್ಷ ವಯಸ್ಸಿನ ಜಿಗ್‌ಮೆ ಯಾಂಗ್‌ಚೆನ್‌ರ 7 ವರ್ಷಗಳ ಶಿಕ್ಷಾವಧಿಯನ್ನು 12 ವರ್ಷಕ್ಕೆ ಹೆಚ್ಚಿಸಲಾಗಿದೆ.

ಅತಿ ಕಡಿಮೆ ಶಿಕ್ಷಾವಧಿ ಎಂದರೆ 8 ವರ್ಷಗಳು. ಅತಿ ಹೆಚ್ಚಿನ ಅವಧಿಯೆಂದರೆ 17 ವರ್ಷಗಳು. ಸನ್ಯಾಸಿನಿಯರಿಗೆ ಹೆಚ್ಚಿನ ಶಿಕ್ಷಾವಧಿ ವಿಧಿಸಿದ್ದಕ್ಕೆ ಮುಖ್ಯ ಕಾರಣವೆಂದರೆ ಅವರುಗಳು ಜೈಲಿನೊಳಗೆ ಕದ್ದು ಸಾಗಿಸಿದ್ದ ಟೇಪ್ ರೆಕಾರ್ಡ್‌ರನಲ್ಲಿ ಹಾಡುಗಳನ್ನು ಧ್ವನಿ ಮುದ್ರಿಸಿದ್ದುದ್ದಕ್ಕಾಗಿ. ಚೈನಾದ ಅಧಿಕಾರಿಗಳ ಪ್ರಕಾರ ಅವರು ರಾಜ್ಯ ದ್ರೋಹ ಮಾಡಿದ್ದಾರೆ, ಅಶಾಂತಿಯನ್ನು ದೇಶದೊಳಗೆ ಹರಡುತ್ತಿದ್ದರಿಂದ ಅವರಿಗೆ ಶಿಕ್ಷೆ ನೀಡಲಾಗಿದೆ. ಧ್ವನಿ ಮುದ್ರಿತ ಟೇಪ್‌ರೆಕಾರ್ಡರ್‌ನಲ್ಲಿ ಪ್ರತಿಯೊಬ್ಬ ಸನ್ಯಾಸಿನಿಯು ತನ್ನ ಹೆಸರನ್ನು ತಿಳಿಸಿ, ಅದರಲ್ಲಿ ಹಾಡನ್ನು, ಕವಿತೆಯನ್ನು ತನ್ನ ಕುಟುಂಬದವರಿಗೆ, ಬೆಂಬಲಿಗರಿಗೆ ಅರ್ಪಿಸಿದ್ದಾರೆ. ಸನ್ಯಾಸಿನಿಯರು ಸಂಸಾರವನ್ನು ತ್ಯಜಿಸಿರುತ್ತಾರಾದ್ದರಿಂದ ಇಲ್ಲಿ ಅವರು ತಿಳಿಸುವ ಕುಟುಂಬ ಅಥವಾ ತಂದೆ-ತಾಯಿಯರೆಂದರೆ ಅವರ ಆಶ್ರಮ ಅಥವ ಅವರ ನಾಯಕ ದಲೈಲಾಮ ಎಂದರ್ಥ.

ಈ ಸನ್ಯಾಸಿನಿಯರಂತೆ ಇನ್ನೂ ಅನೇಕ ಸನ್ಯಾಸಿನಿಯರು, ವಿದ್ಯಾರ್ಥಿನಿಯರು, ಸಾಮಾನ್ಯ ಮಹಿಳೆಯರು ಟಿಬೇಟಿನ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತ ಬಂಧಿಖಾನೆ ಸೇರಿದ್ದಾರೆ, ತಪ್ಪಿಸಿಕೊಂಡು ಬೇರೆ ದೇಶಗಳಲ್ಲಿ ಆಶ್ರಯ ಪಡೆದುಕೊಂಡಿದ್ದಾರೆ, ಪ್ರಾಣ ತೆತ್ತಿದ್ದಾರೆ. ಒಂದು ಅಂದಾಜಿನಂತೆ ಶಾಂತಿಯುತ ಪ್ರತಿಭಟನೆಗಾಗಿ ಜೈಲಿನಲ್ಲಿ ಶಿಕ್ಷೆ ಅನುಭವಿಸುತ್ತಿರುವ ಮಹಿಳೆಯರ ಸಂಖ್ಯೆ ಸುಮಾರು 453. ಅವರುಗಳನ್ನು ಗುಟ್ಸಾ, ಡ್ರಾಪ್‌ಚಿ, ಟ್ರಿಸಂನಲ್ಲಿನ ಜೈಲಿನಲ್ಲಿ ಇರಿಸಲಾಗಿದೆ. ಟಿಬೆಟಿನ ಸ್ವಾತಂತ್ರ್ಯದ ಹೋರಾಟದಲ್ಲಿ ಶಾಂತಿಯುತವಾಗಿ ಪ್ರತಿಭಟಿಸುವ ಮೂಲಕ ಅಲ್ಲಿನ ಮಹಿಳೆಯರು ಬಹುಮುಖ್ಯ ಪಾತ್ರ ವಹಿಸುತ್ತಿದ್ದಾರೆ. 1987 ಡಿಸೆಂಬರ್ 15ರಂದು ಗರು ಸನ್ಯಾಸಾಲಯದ 15 ಜನ ಸನ್ಯಾಸಿನಿಯರು ನಡೆಸಿದ ಪ್ರತಿಭಟನೆಯೇ ಮೊದಲನೆಯದು. ಮಹಿಳೆಯರೇ ಸಂಘಟಿಸಿದ ಮೊದಲ ಪ್ರತಿಭಟನಾ ಮೆರವಣಿಗೆಯದು. 1987 ಅಕ್ಟೋಬರ್ ಮತ್ತು 1988 ಮಾರ್ಚಿಯಲ್ಲಿ ನಡೆದ ಬೃಹತ್ ಪ್ರತಿಭಟನೆಯಲ್ಲಿ ಮಹಿಳೆಯರು ಸಕ್ರೀಯವಾಗಿ ಪಾಲ್ಗೊಂಡರು. 1989 ಮಾರ್ಚಿನಲ್ಲಿ ದಿನಾಂಕ 5-7ರ ಅವಧಿಯಲ್ಲಿ ಅನೇಕ ಪ್ರತಿಭಟನೆಗಳು ನಡೆದವು. ಇದರಿಂದ ರಾಜಧಾನಿ ಲಾಸಾದಲ್ಲಿ ಮಿಲಿಟರಿ ಶಾಸನವನ್ನು ಜಾರಿ ಗೊಳಿಸಲಾಯ್ತು. 1990 ಏಪ್ರಿಲ್‌ನಲ್ಲಿ ಮಿಲಿಟರಿ ಶಾಸನವನ್ನು ತೆಗೆದ ನಂತರ ಅದೇ ವರ್ಷ ಆಗಸ್ಟ್‌ನಲ್ಲಿ 15 ಜನ ಸನ್ಯಾಸಿನಿಯರು ನೊರ್‌ಬುಲಿಂಗ್‌ಕಾ (ದಲೈಲಾಮರ ಹಿಂದಿನ ಅರಮನೆ)ದಲ್ಲಿ ಧರಣಿ ನಡೆಸಿದರು. ಅತಿಯಾದ ನಿಯಂತ್ರಣ ವಿದ್ದಾಗಲೂ ಸಹ ಸಣ್ಣ ಮಟ್ಟದಲ್ಲಾದರೂ ಅನೇಕ ಹೋರಾಟಗಳು ನಡೆದವು. 1995 ಫೆಬ್ರವರಿಯಲ್ಲಿ ನಡೆದ 6 ಸ್ವಾತಂತ್ರ್ಯ ಹೋರಾಟಗಳಲ್ಲಿ 4ರ ಮುಂದಾಳತ್ವ ವಹಿಸಿದ್ದವರು ಮಹಿಳೆಯರು. 1987ರಿಂದ ಇಲ್ಲಿಯವರೆಗೆ ಸುಮಾರು 67 (ಒಟ್ಟು ಪ್ರತಿಭಟನೆಗಳ ಅರ್ಧದಷ್ಟು) ಪ್ರತಿಭಟನಾ ಹೋರಾಟಗಳ ಮುಂದಾಳತ್ವವನ್ನು ಮಹಿಳೆಯರು ವಹಿಸಿದ್ದಾರೆ.

1987ರ ನಂತರ ಬಂಧನಕ್ಕೊಳಗಾದವರ ಸಂಖ್ಯೆ ಹೆಚ್ಚುತ್ತಿದೆ. ಕೇವಲ ಕೆಲವೆ ನಿಮಿಷಗಳ ಶಾಂತಿಯುತ ಪ್ರತಿಭಟನೆಗಾಗಿ, ಸ್ವಾತಂತ್ರ್ಯ ಹೋರಾಟದ ಪೋಸ್ಟರ್ ಅಥವಾ ಕರಪತ್ರ ಹಂಚಿದ್ದಕ್ಕಾಗಿ ಮಹಿಳೆಯರನ್ನು ಬಂಧಿಸಲಾಗಿದೆ. ಟಿಬೆಟನ ನಾಲ್ಕು ಮುಖ್ಯ ಬಂಧಿಖಾನೆಗಳೆಂದರೆ - ವಯಸ್ಕರ ಸುಧಾರಣಾ ಕ್ಯಾಂಪ್, 2 ಮಕ್ಕಳ ಸುಧಾರಣಾ ಕ್ಯಾಂಪ್ (ಇವೆರಡು ರಾಜಧಾನಿ ಲಾಸದಲ್ಲಿವೆ). ಇನ್ನೊಂದು ಬಂಧಿಖಾನೆ ಚಾಕ್‌ಪೋರಿ (ಪೊಟಾಲಾ ಅರಮನೆ

ಎದುರುಗಿನ ಗುಡ್ಡ)ಯಲ್ಲಿದೆ ಎಂದು ಹೇಳಲಾಗಿದೆ. ಲಾಸಾದಿಂದ ಪೂರ್ವಕ್ಕೆ 10 ಕಿ.ಮೀ. ದೂರದಲ್ಲಿರುವ ಗುಟ್ಸಾ ಬಂಧೀಖಾನೆಯು ರಾಜಕೀಯ ಖೈದಿಗಳ ವಿಚಾರಣೆಗಾಗಿ, ಬಂಧನಕ್ಕಾಗಿ ಇದೆ. ಲಾಸಾದಿಂದ ಉತ್ತರಕ್ಕೆ 5 ಕಿ.ಮೀ. ದೂರದಲ್ಲಿರುವ ಸ್ಯಾಂಗ್‌ಯಿಪ್ ಬಂಧಿಖಾನೆಯಲ್ಲಿ ವಯಸ್ಕರು ಮತ್ತು ಮಕ್ಕಳಿಗಾಗಿ ಎರಡು ಸುಧಾರಣ ಕೇಂದ್ರಗಳಿವೆ.

ಸುಧಾರಣಾ ಕೇಂದ್ರಗಳಲ್ಲಿ ಶೇ. 60% ಹೆಚ್ಚಿನ ಜನರನ್ನು ವಿಚಾರಣೆ ನಡೆಸದೆ ಇರಿಸಲಾಗಿದೆ. ಅವರನ್ನು ಅಲ್ಲಿನ ಆಡಳಿತ ಮಂಡಳಿಯು ಅವರ "ಅಪರಾಧ"ಗಳಿಗೆ ಶಿಕ್ಷೆ ವಿಧಿಸಿ ಡ್ರಾಪ್‌ಚಿಯಲ್ಲಿರುವ ವಿವಿಧ ಬಂಧಿಖಾನೆಗಳಿಗೆ ವರ್ಗಾಯಿಸುತ್ತಾರೆ. ಟಿಬೆಟಿನ ಸ್ವಾಯತ್ತ ವಲಯ ಬಂಧೀಖಾನೆ ಸಂಖ್ಯೆ 1 (Tibet autnomous Region Prison No. 1) ಡ್ರಾಪ್‌ಚಿ ಬಂಧಿಖಾನೆಯಲ್ಲಿ ವಿಚಾರಣೆಯಾದವರನ್ನು ಮಾತ್ರ ಇರಿಸಲಾಗುತ್ತದೆ. ಡ್ರಾಪ್‌ಚಿ ಬಂಧಿಖಾನೆಯಲ್ಲಿ ಅತಿಯಾದ ಕಿರುಕುಳ ಇಲ್ಲವೆಂದು ಹೇಳಲಾಗುತ್ತದೆ. ಆದರೆ ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರೇ ಇರುವ ಗುಟ್ಸಾದಲ್ಲಿ ತೀವ್ರ ಕಿರುಕುಳ ನೀಡಲಾಗುತ್ತದೆ. ಇದಲ್ಲದೆ 1992ರಲ್ಲಿ ಲಾಸಾದಿಂದ ಪಶ್ಚಿಮಕ್ಕೆ 10 ಕಿ.ಮೀ. ದೂರದಲ್ಲಿ ಟ್ರಿಸಂ ವಿಚಾರಣ ಕೇಂದ್ರವನ್ನು ಪ್ರಾರಂಭಿಸಲಾಯಿತು.

ಎಲ್ಲಾ ಮೊಕದ್ದಮೆಗಳಲ್ಲೂ ಬಂಧಿತರಿಗೆ ಸಂಬಂಧಪಟ್ಟ ಯಾವ ವಿಷಯವನ್ನು ಸಂಬಂಧಿಕರಿಗೆ ಹೇಳಲಾಗುವುದಿಲ್ಲ. ಕಾನೂನಿನಲ್ಲಿ ಆ ಅವಕಾಶವಿದ್ದರೂ ಜಾರಿಯಾಗುವುದಿಲ್ಲ. ವಿಶ್ವಸಂಸ್ಥೆಯ ನಿಯಮ 15 (ವಿಚಾರಣೆ ಅಥವಾ ಬಂಧಿಸಲ್ಪಟ್ಟವರ ರಕ್ಷಣೆಗಾಗಿರುವ ನಿಯಮ) ನಿಯಮ 16 (ವಿಚಾರಣೆಗೊಳಪಡಿಸುವ ಅಧಿಕಾರಿಗಳು ಅರೆಸ್ಟ್ ಮಾಡಿದ ನಂತರ ವಿಚಾರಣೆಗೊಳಪಡಿಸಿರುವವರ ಬಗ್ಗೆ ಪ್ರಕಟಿಸಬೇಕು) ಯಾವುದನ್ನು ಟಿಬೆಟಿನಲ್ಲಿ ಪಾಲಿಸುವುದಿಲ್ಲ, ಅರೆಸ್ಟ್ ಆದ ಬಳಿಕ ಹೆಚ್ಚಿನ ಜನರಿಗೆ ವಿಚಾರಣೆಯೇ ನಡೆಯುವುದಿಲ್ಲ. ಅವರನ್ನು ಪ್ರತಿನಿಧಿಸುವ ವಕೀಲರುಗಳೂ ಇರುವುದಿಲ್ಲ. ಉದಾಹರಣೆಗೆ ಫೆಬ್ರವರಿ 1992ರಲ್ಲಿ ಕ್ರಾಂತಿಕಾರಿ ಚಟುವಟಿಕೆಗಳನ್ನು ಹಬ್ಬಿಸುತ್ತಿರುವರೆಂದು ಅರೆಸ್ಟ್ ಮಾಡಿದ ಸನ್ಯಾಸಿನಿಯನ್ನು ಶಿಕ್ಷೆ ನೀಡುವ ಮೊದಲು ವಿಚಾರಣೆಗಾಗಿ 10 ವಾರ ಇಟ್ಟುಕೊಳ್ಳಲಾಗಿತ್ತು. ಯಾವ ವಕೀಲರನ್ನು ಅವರು ಕಾಣಲಾಗಲಿಲ್ಲ. ಬಹಳಷ್ಟು ವಿಚಾರಣೆಗಳಲ್ಲಿ ಬಂಧಿತರಿಗೆ ಅತಿಯಾದ ಕಿರುಕುಳ ನೀಡಿ ಮಾಡಿಲ್ಲದ ತಪ್ಪುಗಳನ್ನು ಒಪ್ಪಿಕೊಳ್ಳುವಂತೆ ಅಧಿಕಾರಿಗಳು ಒತ್ತಾಯಿಸುತ್ತಾರೆ.

ಟಿಬೆಟಿನ ಸ್ವಾತಂತ್ರ್ಯ ಕೇಳುತ್ತಿರುವವರನ್ನು ವಿಚ್ಛಿದ್ರಕಾರಕ ಶಕ್ತಿಗಳೆಂದು (Counter-Revolutiouaries) ಎಂದು ಚೈನಾದ ಅಧಿಕಾರಿಗಳು ಅರೆಸ್ಟ್ ಮಾಡಿ ಬಂಧಿಸುತ್ತಿದ್ದಾರೆ. ಚೈನಾದ ಅಪರಾಧ ದಂಡಸಂಹಿತೆಯ ಆರ್ಟಿಕಲ್ 90ರಂತೆ Counter revolution ಎಂದರೆ ಸಮಾಜವಾದಿ, ಕಾರ್ಮಿಕರ ಸರ್ವಾಧಿಕಾರವಿರುವ ರಾಜಕೀಯ ವ್ಯವಸ್ಥೆಯನ್ನು ಉರುಳಿಸುವ ಗುರಿ ಹೊಂದಿರುವ ಚಟುವಟಿಕೆಗಳು. ಸಾರ್ವಜನಿಕವಾಗಿ ರಾಜಕೀಯ ಅಭಿಪ್ರಾಯಗಳನ್ನು ಚರ್ಚಿಸುವ, ಚೈನಾದ ಸರ್ಕಾರವನ್ನು ಟೀಕಿಸುವ ಟಿಬೆಟಿಯರನ್ನು ಅರೆಸ್ಟ್ ಮಾಡಲಾಗುತ್ತದೆ. 1990ರಲ್ಲಿ ಕುನ್‌ಸ್ಯಾಂಗ್ ಎಂಬ ಸನ್ಯಾಸಿನಿಯನ್ನು - ತನ್ನ ಆಶ್ರಮದ ಇಬ್ಬರು ಸನ್ಯಾಸಿನಿಯರನ್ನು ಅರೆಸ್ಟ್ ಮಾಡಿದ್ದರ ವಿರುದ್ಧ ಬರೆದ ಅನಾಮಧೇಯ ಕರಪತ್ರವನ್ನು ಬರೆದಳೆಂಬ ಕಾರಣಕ್ಕೆ ಜೈಲು ಶಿಕ್ಷೆ ನೀಡಲಾಗಿತ್ತು. ಕರಪತ್ರವು ಟಿಬೇಟ್ ಸ್ವಾತಂತ್ರ್ಯಕ್ಕೂ ಕರೆ ನೀಡಿತ್ತು. ತಾಶಿದೊಲ್ಮಾಳನ್ನು ದಲೈಲಾಮಾರ ಭಾಷಣದ ಕ್ಯಾಸೆಟ್ ಮತ್ತು ಸ್ವಾತಂತ್ರಪರ ಕರಪತ್ರಗಳನ್ನಿಟ್ಟುಕೊಂಡಿದ್ದಳೆಂಬ ಕಾರಣಕ್ಕೆ 1988 ಮಾರ್ಚ್ 7ರಂದು ಬಂಧಿಸಿ ಜೈಲು ಶಿಕ್ಷೆ ವಿಧಿಸಲಾಯ್ತು. 1993 ಜೂನ್ 14ರಂದು ಬಂಧಿಸಲಾದ ಗ್ಯಾಲ್ಟ್‌ಸನ್, 1993 ಮಾರ್ಚ್ 13ರಂದು ಬಂಧಿಸಲಾದ ಚಂಪಾ ಡೆಡ್ರಾಲ್ ಮತ್ತು ಶೆರಬ್ ಗ್ಯಾವಾಂಗ್ ಕೇವಲ 15 ವಯಸ್ಸಿನವರು. ಅವರನ್ನು ಎಲ್ಲಿ ಇರಿಸಲಾಗಿದೆ ಎಂಬುದು ತಿಳಿದಿಲ್ಲ.

ಪ್ರತಿರೋಧಿಸುವ ಮಹಿಳೆಯರಿಗೆ ದೈಹಿಕ ಕಿರುಕುಳ ನೀಡುವುದಂತು ಸಾಮಾನ್ಯ. ಎಲೆಕ್ಟ್ರಿಕ್ ಶಾಕ್, ಹೊಡೆತದಿಂದಾಗಿ ಮಹಿಳೆಯರು ಗಾಯಗೊಂಡಿದ್ದಾರೆ. 4-5 ತಿಂಗಳ ಗರ್ಭಿಣಿ ಧಾಮ್‌ಚೊಯಿ ಪೆಮೊ ಎಂಬ ಮಹಿಳೆಗೆ ದೈಹಿಕ ಕಿರುಕುಳದಿಂದಾಗಿ ಗರ್ಭಪಾತವಾಯಿತು. ಬಲವಂತವಾಗಿ ಮಹಿಳೆಯರಿಂದ ರಕ್ತದಾನ ಮಾಡಿಸಲಾಗುತ್ತದೆ. ಉರಿವ ಸಿಗರೇಟಿನಿಂದ ಸುಡುವುದು, ನಾಯಿಗಳನ್ನು ಛೂ ಬಿಡುವುದು, ವಿದ್ಯುತ್ ರಾಡ್‌ಗಳನ್ನು ಬಳಸುವ ಮೂಲಕ ಕಿರುಕುಳ ನೀಡಲಾಗುತ್ತದೆ. ವಿಶ್ವಸಂಸ್ಥೆಯ ಮಾನವೀಯ ಹಕ್ಕುಗಳ ಒಪ್ಪಂದಕ್ಕೆ ಸಹಿ ಹಾಕಿಯೂ, ಎಲ್ಲ ಮಾನವೀಯ ಹಕ್ಕುಗಳ ಕಾನೂನನ್ನು ಉಲ್ಲಂಘಿಸಿರುವ ಚೈನಾ ಸರ್ಕಾರ ಖಂಡನಾರ್ಹ. ಸರ್ವಾಧಿಕಾರಿ ಆಡಳಿತವಿರುವ ಚೈನಾ ದೇಶ ಮಾರ್ಕ್ಸ್‌ವಾದಿ ದೇಶವೆಂದು ಕರೆಸಿಕೊಳ್ಳುವುದು ಎಂಥಾ ವಿಪರ್ಯಾಸ!

ಕೃಪೆ: *'Our will against their night'*

ಟಿಬೆಟಿಯನ್ ವಿಮೆನ್ಸ್ ಅಸೋಸಿಯೇಷನ್‌ನ ವರದಿ

# ಕೊರಗ ಮಹಿಳೆಯರ ಸ್ಥಾನಮಾನ

*ಪ್ರಮೀಳಾ ಜೆ. ವಾಜ್*

ಈ ನಾಡಿನ ಮೂಲನಿವಾಸಿಗಳಾದ ಗಿರಿಜನರು ತಮ್ಮದೇ ಆದ ಪರಂಪರೆಯನ್ನು ಹೊಂದಿದ್ದಾರೆ. ಕಾಡುನಿವಾಸಿಗಳಾಗಿ ಪ್ರಕೃತಿಯ ಕೂಸುಗಳಾಗಿ ಇವರು ಬದುಕುತ್ತಿದ್ದರು. ಮುಂದೆ ಅರಣ್ಯವನ್ನು ರಾಷ್ಟ್ರೀಕರಣ ಮಾಡಲಾಯ್ತು. ಅಂದರೆ ಅರಣ್ಯದ ರಕ್ಷಣೆಯ ಹೊಣೆ ಸರಕಾರ ಹೊತ್ತಿತು. ಅರಣ್ಯೋತ್ಪತ್ತಿಯ ಹಕ್ಕು ಸರಕಾರದ್ದಾಯಿತು. ಕಾಡುಗಳಲ್ಲಿ ಬದುಕುತ್ತಿದ್ದ ಜನರು ಅಲ್ಲಿ ತಮ್ಮ ಅಧಿಕಾರ ಕಳೆದುಕೊಂಡರು. ಅವರು ತಿನ್ನುತ್ತಿದ್ದ ಹಣ್ಣುಗಳು ಅವರಿಗೆ ಇಲ್ಲವಾಯ್ತು. ಕಾಡು ಪ್ರಾಣಿಗಳನ್ನೂ ಬೇಟೆಯಾಡುವಂತಿಲ್ಲ, ಬೀಳುಗಳನ್ನು ಕಡಿಯುವಂತಿಲ್ಲ, ಜೇನು ತೆಗೆಯುವಂತಿಲ್ಲ, ಹೀಗೆ ತಮ್ಮ ಹೊಟ್ಟೆ ಹಸಿವು ತಣಿಸಿಕೊಳ್ಳುವ ಉದ್ದೇಶದಿಂದ ಕಾಡುಗಳ ಗಡಿ ಪ್ರದೇಶಗಳಲ್ಲಿ ಬಂದರು. ಆಸುಪಾಸಿನಲ್ಲಿ ವ್ಯವಸಾಯ ನಡೆಸಿಕೊಂಡಿದ್ದ ಇತರ ಜನರ ಒಡನಾಟ ಪ್ರಾರಂಭವಾಯ್ತು. ಆದರೆ ನಾಗರೀಕತೆಯ ಹಾದಿಯಲ್ಲಿ ಈಗಾಗಲೇ ಮುಂದುವರಿದ ಜನರ ಜೊತೆ ಹೊಂದಾಣಿಕೆ ಸುಲಭವಲ್ಲ, ಮುಗ್ಧ ಗಿರಿಜನರು ಇತರ ಜನರಿಂದ ಉಪಯೋಗಿಸಲ್ಪಟ್ಟರು.

ಇಂದಿಗೂ ಬುಡಕಟ್ಟು ಜನಾಂಗ, ಗಿರಿಜನರು ಎಂದು ಕರೆಯಲ್ಪಡುವ ಈ ಜನರು ತಮ್ಮ ಅಸ್ತಿತ್ವಕ್ಕಾಗಿ ಹೋರಾಡುತ್ತಿದ್ದಾರೆ. ಸ್ವಂತಿಕೆ ಇಲ್ಲದ ಪರಾವಲಂಬಿಗಳಾಗಿ ಜೀವಿಸುತ್ತಿದ್ದಾರೆ. ಈ ಒಂದು ಲೇಖನ ಕುಂದಾಪುರ ತಾಲೂಕಿನ ಕೊರಗ ಜನಾಂಗದ ಮಹಿಳೆಯರ ಬದುಕಿನ ಮೇಲೆ ಬೆಳಕು ಬೀರುವ ಒಂದು ಪ್ರಯತ್ನವಾಗಿದೆ. ಬುಡಕಟ್ಟು ಜನರಲ್ಲಿ ಲಿಂಗಭೇದವಿಲ್ಲ, ಕೌಟುಂಬಿಕ ನಿರ್ಧಾರಗಳನ್ನು ತೆಗೆದುಕೊಳ್ಳುವಾಗ ಮಹಿಳೆ, ಪುರುಷ ಸಮನಾಗಿರುತ್ತಾರೆ ಎಂಬುದು ಸಾಮಾನ್ಯ ಊಹೆ. ಹಾಗೂ ಹಿಂದಿನಿಂದಲೂ ನಾವು ಅವರಲ್ಲಿ ಗೌರವಿಸಿದ್ದ ಒಂದು ಮೌಲ್ಯ. ಆದರೆ ಇಂದು ಪರಿಸ್ಥಿತಿ ಬದಲಾಗುತ್ತಿದೆ. ಸರಳ ಜೀವನ ನಡೆಸುತ್ತಿದ್ದ ಕೊರಗ ಜನರು ಮುಖ್ಯವಾಹಿನಿಯ ಜನರ ಬದುಕಿನ ರೀತಿಗೆ ಮಾರು ಹೋಗುತ್ತಿದ್ದಾರೆ.

**ಕೊರಗ ಮಹಿಳೆ ಹಾಗೂ ವಿದ್ಯಾಭ್ಯಾಸ :**

ಶಾಲೆ ಕೊರಗರ ಪಾಲಿಗೆ ಇನ್ನೂ ಮಹತ್ವದ ಸ್ಥಳವಾಗಿಲ್ಲ, ಅದರಲ್ಲೂ ಮುಖ್ಯವಾಗಿ ಕೊರಗ ಮಹಿಳೆಯರಲ್ಲಿ ಹೆಚ್ಚಿನವರು ಅನಕ್ಷರಸ್ಥರು. ವಿದ್ಯೆಯಿಂದ ಇವರು ದೂರವಾಗಿರಲು ಹಲವಾರು ಕಾರಣಗಳಿವೆ. ಉದಾಹರಣೆಗೆ ಶಾಲೆಯಿಂದ ಅವರ ವಾಸಸ್ಥಳಕ್ಕಿರುವ ದೂರ, ಅವರು ಶಾಲೆಗಳಲ್ಲಿ ಹಾಗೂ ಊರಲ್ಲಿ ಇಂದಿಗೂ ಎದುರಿಸುತ್ತಿರುವ ತಾರತಮ್ಯ ಬೇಧ ಭಾವ, ಕೀಳರಿಮೆ ಇತ್ಯಾದಿ. ಅಲ್ಲದೆ ಬುಟ್ಟಿ ನೇಯ್ಗೆಯಲ್ಲಿ ತೊಡಗಿಕೊಂಡಿರುವ ಮಹಿಳೆಯರು ಬೀಳು ತರಲು ಕಾಡಿಗೆ ಅಥವಾ ದೂರ ಪ್ರದೇಶಕ್ಕೆ ಹೋಗುವ ಮಹಿಳೆಯರು (ತಾಯಂದಿರು) ತಮ್ಮ ಚಿಕ್ಕ ಮಕ್ಕಳ ಆರೈಕೆಯ ಜವಾಬ್ದಾರಿಯನ್ನು ಹಿರಿಯ ಹೆಣ್ಣು ಮಕ್ಕಳಿಗೆ ಕೊಡುವುದರಿಂದ ಶಾಲಾ ವಯಸ್ಸಿನಲ್ಲಿ ಅವರು ಶಾಲೆಯಿಂದ ದೂರ ಉಳಿಯುತ್ತಾರೆ. ಹೀಗೆ ಹೆಣ್ಣು ಮಗುವಿನ ಕಲಿಕೆಗೆ ಕಡಿವಾಣ ಬೀಳುತ್ತದೆ. ಪ್ರಸ್ತುತ ತಾಲೂಕಿನ 1 ವಿದ್ಯಾರ್ಥಿನಿ ಮಾತ್ರ ಪದವೀದರೆಯಾಗಿದ್ದಾಳೆ. ಸುಮಾರು 9 ಮಂದಿ ಪದವಿ ಪೂರ್ವ ತರಗತಿಯಲ್ಲಿ ಕಲಿಯುತ್ತಿದ್ದರೆ, 8 ಮಂದಿ 10ನೇ ತರಗತಿಯಲ್ಲಿದ್ದಾರೆ.

**ಕೊರಗ ಮಹಿಳೆ ಹಾಗೂ ಆರ್ಥಿಕ ಪರಿಸ್ಥಿತಿ :-**

ಕೊರಗ ಮಹಿಳೆಯರಲ್ಲಿ ಶೇಕಡಾ 40ರಿಂದ ಶೇಕಡಾ 50 ಮಹಿಳೆಯರು ಬುಟ್ಟಿ ನೇಯ್ಗೆಯಿಂದ ತಮ್ಮ ಬದುಕು ಸಾಗಿಸುತ್ತಿದ್ದಾರೆ. ಬುಟ್ಟಿಗಳ ಬೇಡಿಕೆ ಕಡಿಮೆಯಾಗುತ್ತಿದೆ. ಇವರ ಶ್ರಮದ ಫಲ ಮಧ್ಯವರ್ತಿಗಳಿಗೆ ಹೋಗುತ್ತಿದೆ. ಕಚ್ಚಾ ವಸ್ತುಗಳಿಗಾಗಿ ಇವರ ಪರದಾಟ ಹೇಳತೀರದು. ಬುಟ್ಟಿ ನೇಯ್ಗೆ ಅಲ್ಲದೆ ಇನ್ನೂ ಕೆಲವರು ಕೂಲಿಯಲ್ಲಿ ತೊಡಗಿದ್ದಾರೆ. ಅಲ್ಲಿ ಗಂಡಸರು ಹಾಗೂ ಹೆಂಗಸರ ಕೂಲಿಯಲ್ಲಿ ತಾರತಮ್ಯವಿದೆ. ಗ್ರಾಮೀಣ ಕೊರಗ ಮಹಿಳೆಯರ ಆರ್ಥಿಕ ಪರಿಸ್ಥಿತಿ ಚೆನ್ನಾಗಿಲ್ಲ. ಹಾಗೆಂದ ಮಾತ್ರಕ್ಕೆ ನಗರ ಪಟ್ಟಣಗಳಲ್ಲಿ ಅವರು ಅಭಿವೃದ್ಧಿ ಹೊಂದಿದ್ದಾರೆ ಎನ್ನಲಾಗದು. ಹೆಚ್ಚಾಗಿ ಆಸ್ಪತ್ರೆಗಳಲ್ಲಿ, ಆಫೀಸುಗಳಲ್ಲಿ, ಬ್ಯಾಂಕುಗಳಲ್ಲಿ ಹಾಗೂ ಪುರಸಭೆಗಳಲ್ಲಿ ಶುಚಿತ್ವದ (ಆಯಾ) ಕೆಲಸದಲ್ಲಿ ತೊಡಗಿರುವ ಇವರಿಗೆ ಸಿಗುವ ಸಂಭಾವನೆ ತೀರಾ ಕಡಿಮೆ. ಕುಂದಾಪುರದ ಹೊನ್ನಿ ಕೊರಗತಿ ಶುಚಿತ್ವದ ಕೆಲಸದಿಂದ ತಿಂಗಳಿಗೆ ಸುಮಾರು 800 ರೂಪಾಯಿ ದುಡಿಯುವ ಈಕೆ ಯಾವಾಗಲೂ ಸಂತೋಷದಿಂದಿರುವುದು ನನಗೊಂದು ಯಕ್ಷ ಪ್ರಶ್ನೆಯಾಗಿತ್ತು. ಮದುವೆಯಾದ ಗಂಡನಿಂದ ದೂರವಾಗಿರುವ ಈಕೆ ಒಬ್ಬಳೇ ಜೀವಿಸುತ್ತಿದ್ದಾಳೆ. ದಿನಕ್ಕೊಮ್ಮೆ ಪೇಟೆ ಸುತ್ತಿ ತನಗೆ ಬೇಕಾದ ಸಾಮಗ್ರಿಗಳನ್ನು ತೆಗೊಳ್ತಾಳೆ, ವಾರಕ್ಕೊಂದು ಸಿನೆಮಾ, ವರ್ಷಕ್ಕೆ 2-3 ಬಾರಿ ಪರ ಊರಿನಲ್ಲಿರುವ ತನ್ನ ಅಕ್ಕನ ಮಗಳ ಮನೆಯಲ್ಲಿ ಒಂದೆರಡು ದಿನ ಇದ್ದು ಬರುವುದು ಅವಳ ಪರಿಪಾಠ. ಸರಳ ಜೀವನ ಹೆಚ್ಚು ಖರ್ಚಿಲ್ಲ, ಆದಾಯವಿಲ್ಲ, ಮಿತವಾದ ಆಸೆಗಳು, ಇದೊಂದು

ನಿದರ್ಶನವಷ್ಟೇ. ಹೀಗೆ ಹಲವಾರು ಕೊರಗ ಮಹಿಳೆಯರೊಂದಿಗೆ ಮಾತನಾಡಿದಾಗಲೂ ನನಗೆ ಅನ್ನಿಸಿದ್ದು ಅಷ್ಟೇ. ಆರ್ಥಿಕ ಮುಗ್ಗಟ್ಟು ಇವರನ್ನು ದೃತಿಕೆಡಿಸಿಲ್ಲ. ಇವರು ಇಂದಿನ ಬಗ್ಗೆ ಹೆಚ್ಚು ಯೋಚಿಸುತ್ತಾರೆ. ಕಾಣದಿರುವ ನಾಳೆಗಳ ಬಗ್ಗೆ ಅತಿಯಾಗಿ ತಲೆಕೆಡಿಸಿಕೊಳ್ಳುವುದಿಲ್ಲ. ತಮ್ಮ ವಿರಾಮ ಸಮಯವನ್ನು ತಮಗೆ ಬೇಕಾದ ಹಾಗೆ ಕಳೆಯುತ್ತಾರೆ. ಹೆಚ್ಚಿಗುಳಿದ ಸಮಯವನ್ನು ಕುಟುಂಬದೊಂದಿಗೆ ಗೆಳತಿಯರೊಂದಿಗೆ ವ್ಯಯಿಸುತ್ತಾರೆ. ಕಾಣದಿಹ ದಾರಿಯಲಿ ಮುಂಬರುವ ಕಷ್ಟಗಳ ಇಂದೇ ನೆನೆಯುವ, ಕೊರಗುವ ನಮಗೆ ಇದೊಂದು ಮಾರ್ಗದರ್ಶನವಲ್ಲವೇ?

**ಕೊರಗ ಮಹಿಳೆಯರು ಹಾಗೂ ಸಾಮಾಜಿಕ ಬದುಕು :**

ಕೊರಗ ಸಮುದಾಯದ ಮಹಿಳೆಯರು ಇತರ ಸಮುದಾಯಗಳಿಗಿಂತ ಹೆಚ್ಚು ಸ್ವತಂತ್ರರು ಎಂಬುದು ಅವರ ಸಾಮಾಜಿಕ ಬದುಕಿನಿಂದ ನಾವು ಕಂಡುಕೊಳ್ಳುತ್ತೇವೆ. ಅವರಿಗೆ ಹೆಚ್ಚು ಲೈಂಗಿಕ ಸ್ವಾತಂತ್ರವಿದೆ. ಅವರಲ್ಲಿ ಸುಮಾರು ಶೇಕಡಾ 70ರಷ್ಟು ಯುವತಿಯರು ತಮ್ಮ ಜೀವನ ಸಂಗಾತಿಯನ್ನು ತಾವೇ ಆರಿಸಿಕೊಳ್ಳುತ್ತಾರೆ. ಹೆಚ್ಚಾಗಿ ಕೆಲವು ಕಾಲ ಪರಸ್ಪರರೊಂದಿಗೆ ಬದುಕಿದ ಮೇಲೆಯಷ್ಟೇ ಮದುವೆಯ ಪ್ರಸ್ತಾಪವಾಗುತ್ತದೆ. ಹೊಂದಾಣಿಕೆ ಕಷ್ಟವೆನಿಸಿದಾಗ ಬೇರೆಯಾಗುವ ಅವಕಾಶವೂ ಇದೆ. ಇವರಲ್ಲಿ ಬಹುಪತಿತ್ವವೂ ಚಾಲ್ತಿಯಲ್ಲಿದೆ.

ಮದುವೆ ಸಮಾರಂಭ ಬಹಳ ಸರಳ. ಹೆಣ್ಣು ಮದುವೆಯಾದಾಗ ವದುದಕ್ಷಿಣೆಯಾಗಿ ಸೀರೆ, ಅಕ್ಕಿಮುಡಿ, ತೆಂಗಿನಸಸಿ ಹಾಗೂ ಸ್ವಲ್ಪ ಹಣ ಪಡೆಯುತ್ತಾರೆ. ಹೆಚ್ಚಾಗಿ ಮದುವೆಯ ನಂತರವೂ ಹೆಣ್ಣು ಮಕ್ಕಳು ತಾಯಿಯೊಂದಿಗಿರುತ್ತಾರೆ. ಹೀಗಾಗಿಯೇ ಇರಬೇಕು ಹೆಚ್ಚಾಗಿ ಮನೆಗಳು ಹೆಂಗಸರ ಹೆಸರಿನಲ್ಲಿರುತ್ತವೆ.

ಕುಟುಂಬಗಳ ನಿರ್ವಹಣೆಯಲ್ಲಿ ಮಹಿಳೆಯರ ಪಾತ್ರ ಹೆಚ್ಚು. ನಿರ್ಧಾರಗಳನ್ನು ಹೆಚ್ಚಾಗಿ ಕುಟುಂಬದ ಹಿರಿಯ ಪುರುಷ ಮಹಿಳೆ ಸಮಾನವಾಗಿ ತೆಗೆದುಕೊಳ್ಳುತ್ತಾರೆ. ಅವರ ದುಡಿತದ ಮೇಲೆ ಅವರಿಗೆ ಹಕ್ಕಿದೆ.

**ಕೊರಗ ಮಹಿಳೆ ಹಾಗೂ ಸಂಪ್ರದಾಯ :**

ಕೊರಗರ ಸಂಸ್ಕೃತಿ ಸಂಪ್ರದಾಯ ಅವರ ನಂಬಿಕೆಗಳ ಮೇಲೆ ಆಧರಿಸಿದೆ. ಅವರ ಎಲ್ಲಾ ಆಚರಣೆಗಳಲ್ಲಿ ತಲೆನೀರು ಮದುವೆ (ಮೊದಲ ಬಾರಿ ಋತುಮತಿಯಾದಾಗ) ಹಾಗೂ ತೊಟ್ಟಿಲಿಗೆ ಹಾಕುವ ಶಾಸ್ತ್ರ ಹೆಚ್ಚು ಪ್ರಮುಖ.

ಕೊರಗ ಮಹಿಳೆಯರಿಗೆ ಸಂಬಂಧಿಸಿ ಹೊರಗಿನ ಸಮಾಜದಲ್ಲಿ ಅನೇಕ ನಂಬಿಕೆಗಳಿವೆ. ಉದಾಹರಣೆಗೆ ಇತರ ಸಮಾಜದ ಕುಟುಂಬಗಳಲ್ಲಿ ಸಂತಾನ ಪ್ರಾಪ್ತಿಯಾದಾಗ ಅಥವಾ ಹುಟ್ಟಿದ ಮಕ್ಕಳು ಸಾವಿಗೀಡಾದಾಗ ಮುಂದಿನ ಮಗು ಹುಟ್ಟಿದರೆ ಕೊರಗತಿಗೆ ಕೊಡುತ್ತೇವೆ ಎಂದು ಹರಕೆ ಮಾಡಿದರೆ ಮಗು ಬದುಕುತ್ತವೆ ಎಂಬ ನಂಬಿಕೆ ಇದೆ. ಅದಕ್ಕೆ ಸಂಬಂಧಿಸಿದಂತೆ ನಾನು ಬುಡ್ಡು ಕೊರಗತಿಯವರಲ್ಲಿ ಮಾತಾಡಿದಾಗ ಅವರು ಅನುಭವ ಹಂಚಿಕೊಂಡರು. ಒಂದು ಹಿಂದೂ ಕುಟುಂಬದವರ ಮಗು ಸಾವಿನೊಂದಿಗೆ ಹೋರಾಟ ನಡೆಸುತ್ತಿದ್ದ ಸಂದರ್ಭದಲ್ಲಿ ಬುಟ್ಟಿ ಮಾರುವ ಉದ್ದೇಶದಿಂದ ಅಲ್ಲಿ ಬಂದ ದುಡ್ಡು ದೂರದಲ್ಲಿ ನಿಂತಾಗ ಮನೆಯೊಡತಿ ತನ್ನ ಮಗುವನ್ನು ಅವರ ಕೈಗೆ ಇಟ್ಟು ಹಾಲುಣಿಸಲು ಹೇಳಿದ್ರು ಮಗು ಗೆಲುವಾಯ್ತು. ಅಂದಿನಿಂದ ಮಗುವಿನ ಕಾಯಿಲೆ ದೂರವಾಗಿತ್ತು. ಸಂತೋಷಗೊಂಡ ಹೆತ್ತವರು ಇವರಿಗೆ ಸೀರೆ, ಹಣ, ತಲೆಗೆ ಎಣ್ಣೆ ಕೊಟ್ಟಿದ್ರಂತೆ. ಇದು ನಂಬಿಕೆಯ ಒಂದು ಮುಖ.

ಇದಲ್ಲದೆ ಎಂಜಲೆತ್ತುವ ಪದ್ಧತಿಯಾಗಲೀ, ಪಡಿಬೇಡುವ ಪದ್ಧತಿಯಾಗಲೀ ಇನ್ನೂ ಕೆಲವೆಡೆ ಕೊರಗರಲ್ಲಿ ಆಚರಿಸುತ್ತಾರೆ. ಕೊರಗರು ಹೊಟ್ಟೆ ತುಂಬ ಉಂಡು ಸಂತೋಷಪಟ್ಟರೆ ತಮಗೆ ಪುಣ್ಯ ಬರುತ್ತದೆ ಎಂಬುದು ಇತರ ಸಮಾಜದ ನಂಬಿಕೆ. ಹಾಗಂತ ಅವರನ್ನು ಕರೆದು ಕೂರಿಸಿ ಹೊಟ್ಟೆ ತುಂಬ ಊಟ ನೀಡಲಾರರು. ಬದಲಿಗೆ ಎಂಜಲು ತಿಂದರೆ ಮುಂದಿನ ಜನ್ಮದಲ್ಲಿ ತಾವು ಉತ್ತಮ ಜಾತಿಯಲ್ಲಿ ಹುಟ್ಟುತ್ತೇವೆ ಎಂಬ ನಂಬಿಕೆಯನ್ನು ಕೊರಗರಲ್ಲಿ ಹುಟ್ಟಿಸಿದ್ದಾರೆ. ಕೆಲವರು ಈ ನಂಬಿಕೆಯಿಂದಲೇ ಇರಬೇಕು ಅನಿವಾರ್ಯವಲ್ಲದ ಸ್ಥಿತಿಯಲ್ಲಿಯೂ ಇಂದಿಗೂ ಕೊರಗರು ಎಂಜಲೆತ್ತುತ್ತಿರುವುದು. ಇಂತಹ ನಂಬಿಕೆಗಳ ಮೂಲಕ ಹೊರಗಿನ ಸಮಾಜದವ್ರು ಪರೋಕ್ಷವಾಗಿ ಕೊರಗರ ಅನಿಷ್ಟ ಪದ್ಧತಿಗಳಿಗೆ ಕಾರಣವಾಗಿದ್ದಾರೆ. ಇಂದಿಗೂ ಕೊರಗ ಮಹಿಳೆಯರಾಗಲೀ, ಪುರುಷರಾಗಲೀ ಊರ ದೇವಸ್ಥಾನ ಹೊಕ್ಕುವಂತಿಲ್ಲ. ತಾವು ಮೊದಲಿನಿಂದ ನಂಬುತ್ತಿದ್ದ ಭೂತಾಧಿಗಳನ್ನು ಪೂಜಿಸುವ ಇವರು ಹಿಂದೂ ದೇವರನ್ನು (ಗಣಪತಿ, ಕೃಷ್ಣ, ಮಂಜುನಾಥ, ಮೂಕಾಂಬಿಕೆ) ಮೊದಲಾದವರನ್ನು ಆರಾಧಿಸಲು ಆರಂಭಿಸಿದ್ದಾರೆ. ಎಷ್ಟು ಮುಗ್ಧತನ ಅಲ್ಲವೇ? ಆದರೂ ಎಂದಿಗೂ ಅವರು ಹಿಂದುಗಳೆಂದು ಸ್ವೀಕೃತವಾಗಿಲ್ಲ. ಹೀಗೆ ಇಡೀ ವರ್ಣ ವ್ಯವಸ್ಥೆಯಲ್ಲಿ ಕೊರಗರಿಗೆ ಅಸ್ತಿತ್ವವೇ ಇಲ್ಲ. ಇಂದಿಗೂ ಎಲ್ಲೂ ಸಲ್ಲದವರಾಗಿ ಅವರು ಉಳಿದಿದ್ದಾರೆ.

ಮೊದಲು ಕೊರಗರಲ್ಲಿ ಬಂದ ಸಮಸ್ಯೆಗಳು ಅವರೊಳಗೇ ಇತ್ಯರ್ಥವಾಗುತ್ತಿದ್ದವು. ಆದರೆ ಈಗ ಇತರ ಪುರೋಹಿತರಲ್ಲಿ ಹೋಗುವ ಪರಿಪಾಠ ಆರಂಭವಾಗಿದೆ. ಇತರ ಜನರಂತೆ ಕೊರಗರು ಭಟ್ಟರ ಮನೆಯೊಳಗೆ ಹೋಗುವಂತಿಲ್ಲ, ಹಾಗಂತ ಅವರಿಂದ ಪಡೆದ ಹಣದ ಮೇಲೆ ಜನ ನೀರು ಚಿಮುಕಿಸಿ ಶುದ್ಧವೆಂದು ಹೇಳಿ ಜೇಬಿಗಿಳಿಸುತ್ತಾರೆ. ಎಂಥಹಾ ವಿಪರ್ಯಾಸವಲ್ಲವೇ.

ಇತ್ತೀಚಿನ ದಿನಗಳಲ್ಲಿ ರಾಷ್ಟ್ರೀಯ ಹೆದ್ದಾರಿಗಳಿಗೆ ಸಮೀಪವಿರುವ ಕಾಲೋನಿಗಳಲ್ಲಿ ವೇಶ್ಯಾವಾಟಿಕೆ ನಡೆಯುತ್ತಿರುವುದು ನನ್ನ ಗಮನಕ್ಕೂ ಬಂತು. ಹೋಟೇಲುಗಳಲ್ಲಿ, ದೇವಸ್ಥಾನಗಳಲ್ಲಿ ಪ್ರವೇಶ ನಿಷಿದ್ಧವಿರುವ ಕೊರಗ ಮಹಿಳೆಯರೊಂದಿಗೆ ಕಾಮದಾಟವಾಡಲು ಹೇಸುವುದಿಲ್ಲ ಮೇಲ್ವರ್ಗದವರೆಂದು ಕರೆದುಕೊಳ್ಳುತ್ತಿರುವ ಕೆಲವು ಮಹನೀಯರು. ಈ ತಮ್ಮ ಕತ್ತಲಾಟವನ್ನು ಇತರರು ಕಾಣದಿರುವಂತೆ ಮಾಡಲು ಇವರು ಮಾಡಿರುವ ಉಪಾಯಗಳು ಹಲವು. ಇಂತಹಾ ಕಾಲೋನಿಗಳಿಗೆ ವಿದ್ಯುತ್ ಸರಬರಾಜುಗಳು ಸುಸೂತ್ರವಾಗಿ ನಡೆಯದಂತೆ ಮಾಡಿದ ಉದಾಹರಣೆಗಳೂ ಇವೆ.

**ರಾಜಕೀಯ ರಂಗದಲ್ಲಿ ಕೊರಗ ಮಹಿಳೆ :**

ರಾಜಕೀಯ ರಂಗದಲ್ಲಿ ಕೊರಗ ಮಹಿಳೆಯರ ಆಗಮನ ತೀರಾ ಇತ್ತೀಚಿನದು. ಮೀಸಲಾತಿಯಿಂದಾಗಿ ಕೆಲವು ಕೊರಗ ಮಹಿಳೆಯರಿಗೆ ಗ್ರಾಮೊಡಳಿತದಲ್ಲಿ ಸದಸ್ಯತ್ವ ದೊರಕಿದೆ. ಆದರೆ ತಮ್ಮ ಹಕ್ಕು ಬಾಧ್ಯತೆಗಳ ಬಗ್ಗೆ ಅವರಿಗೆ ಇರುವ ಅರಿವು ತೀರಾ ಕಡಿಮೆ. ಒಡೆಯರ ಒತ್ತಾಯಕ್ಕೋ, ರಾಜಕೀಯ ಪುಢಾರಿಗಳ ಹಣದ ಆಮಿಷಕ್ಕೊ ಬಲಿಯಾಗಿ ರಾಜಕೀಯ ರಂಗಕ್ಕೆ ಕಾಲಿಟ್ಟವರೇ ಹೆಚ್ಚು. ಆದರೂ ಸಭೆಗಳಲ್ಲಿ ತಪ್ಪದೇ ಸಮಯಕ್ಕೆ ಸರಿಯಾಗಿ ಹಾಜರಿರುತ್ತಾರೆ. ಚಿಕ್ಕು ಕೊರಗತಿ ಒಂದು ಗ್ರಾಮ ಪಂಚಾಯ್ತಿಯ ಸದಸ್ಯೆ. ಗ್ರಾಮ ಸಭೆಯ ಸಂದರ್ಭದಲ್ಲಿ ನಾನಲ್ಲಿ ಹೋದಾಗ ನೀವು ಅಂದ ತಕ್ಷಣ "ನಾನು ಮೆಂಬರ್" ಎಂದು ನಕ್ಕರು. ಹೌದಾ ಇವತ್ತಿನ ಸಭೆಯಲ್ಲಿ ಏನಾಯ್ತು ಅಂದೆ ಅವ್ರೆಲ್ಲ ನೀರಿನ ಬಗ್ಗೆ, ಬೋರ್‌ವೆಲ್ ರಿಪೇರಿ ಬಗ್ಗೆ ಮಾತಾಡಿದ್ರು ಕಾಫಿ ಕೊಟ್ರು ಪ್ರತೀ ಮೀಟಿಂಗಿಗೂ 20 ರೂ. ಫೀಸು ಕೊಡ್ತಾರೆ ಅಂದ್ರು. ಹೌದು ಅವರು ತಮ್ಮ ಜವಾಬ್ದಾರಿಯನ್ನು ಅರಿತಿಲ್ಲ! ಹೀಗಿರುವಾಗ ಸ್ವರ ಎತ್ತಿಯಾರೆ? ಒಂದು ವೇಳೆ ಸ್ವರ ಎತ್ತಿದರೆ ಹಾಂ.... ಹಾಗೆಂದಾಗ ನಾನು ಇನ್ನೊಂದು ಪಂಚಾಯತ್ ಸಭೆಯಲ್ಲಿ ಭಾಗವಹಿಸಿದ ನೆನಪಾಗ್ತದೆ. ಅಲ್ಲಿ ಔಪಚಾರಿಕ ಸಭೆಯಲ್ಲಿ ನಿರ್ಧಾರಗಳನ್ನು ಅಧ್ಯಕ್ಷರೇ ತೆಗೆದುಕೊಂಡ್ರು. ಅಧ್ಯಕ್ಷರು ಇತರರ ಅಭಿಪ್ರಾಯ ಕೇಳಿದ್ರು ಯಾರೂ ವ್ಯತಿರಿಕ್ತವಾಗಿ ಪ್ರತಿಕ್ರಿಯಿಸಲಿಲ್ಲ. ಕೊನೆಗೆ ಇನ್ನೇನಾದ್ರೂ ಸಮಸ್ಯೆ ಇದ್ದರೆ ಹೇಳಿ ಅಂದಾಗ ಹಾಜರಿದ್ದ 6 ಪುರುಷ ಹಾಗೂ 4 ಮಹಿಳಾ ಸದಸ್ಯರಲ್ಲಿ ಇದ್ದ ಮೌನ ಮುರಿದ ಬಸವಿ ಎದ್ದು ನಿಂತು" ತಮ್ಮ ಕ್ಷೇತ್ರದಲ್ಲಿ ಯಾರೂ ಬಂದು ಸರಕಾರಿ ಜಾಗದಲ್ಲಿರುವ ಗಾಳಿಮರ ಕಡೀತಾರೆ" ಅಂದ್ರು. ಅದಕ್ಕೆ ಸಂಬಂಧಿಸಿದಂತೆ ಮಾಹಿತಿ ಕೊಡಬಲ್ಲೆ ಎಂದ್ರು ಆದರೂ ಅವರ ಮಾತಿಗೆ ಬೆಲೆ ಸಿಕ್ಕಲಿಲ್ಲ. ಹೌದು ಇವರ ಸ್ವರಕ್ಕೆ ಬೆಲೆ ಸಿಗಬೇಕಾದರೆ ಕೆಲವು ದಶಮಾನಗಳೇ ಬೇಕಾದಾವು ಅನ್ನಿಸ್ತು. ಪ್ರೋತ್ಸಾಹ, ಸಹಕಾರ ದೊರೆತರೆ ಕೊರಗ ಮಹಿಳೆಯರು ಕ್ರಿಯಾತ್ಮಕವಾಗಿ ಕೆಲಸ ಮಾಡುವುದರಲ್ಲಿ ಸಂದೇಹವಿಲ್ಲ. ಹೀಗಿರುವಾಗಲೂ ಇಂದಿಗೂ ಕೊರಗ ಸದಸ್ಯರು ಕೆಲವು ಪಂಚಾಯ್ತಿಗಳಲ್ಲಿ ಇತರರೊಂದಿಗೆ ಕುಳಿತುಕೊಳ್ಳುವಂತಿಲ್ಲ ಎನ್ನುವ ಸತ್ಯ ಆಶ್ಚರ್ಯ ಹುಟ್ಟಿಸುತ್ತದೆ.

**ಕೊರಗ ಮಹಿಳೆಯರು ಮತ್ತು ಸರಕಾರಿ ಯೋಜನೆಗಳು :-**

ಸರಕಾರದ ಯೋಜನೆಗಳಾಗಲೀ, ರಾಜಕಾರಣಿಗಳ ಆಶ್ವಾಸನೆ ಘೋಷಣೆಗಳಾಗಲೀ ಕೊರಗ ಮಹಿಳೆಯರ ಬದುಕಿನಲ್ಲಿ ಹೆಚ್ಚೇನೂ ಬದಲಾವಣೆ ತಂದಿಲ್ಲ. ಒತ್ತಾಯದಿಂದ ಸಾಲ ಕೊಡುತ್ತಾರೆ ಆದರೆ ವಿನಿಯೋಗದ ಅರಿವು ನೀಡಿಲ್ಲ. ನಾನು ಕಂಡಂತೆ ಮೋಹಿನಿ ಎಂಬುವವರಿಗೆ 23 ಸಾವಿರದ ಹೈನುಗಾರಿಕೆ ಅನುದಾನ ನೀಡಲಾಯ್ತು. ಅದರಲ್ಲಿ ಕೊಂಡದನ ಸಾಕಲು ತಗಲುವ ವೆಚ್ಚ ದಿನವೊಂದಕ್ಕೆ 14 ರೂಪಾಯಿ, ಹಾಲು ಮಾರಿ ದೊರೆಯುವ ಹಣ ದಿನಕ್ಕೆ 16 ರೂಪಾಯಿ, 5 ಸೆಂಟ್ಸ್ ಮನೆಯಲ್ಲಿ ವಾಸಿಸುವ ಈಕೆಗೆ ದನ ಸಾಕುವ ಬಗ್ಗೆ ತಿಳುವಳಿಕೆ ಇಲ್ಲ. ಕೆಲವೇ ದಿನಗಳಲ್ಲಿ ದನ ಸತ್ತು ಹೋಯ್ತಿತು. ಸ್ವಲ್ಪ ವಿಮೆ ಹಣ ಸಿಕ್ಕಿತು ಅನ್ನಿ. ಆದರೆ ಸರಕಾರದ ಉದ್ದೇಶ ಎಷ್ಟರಮಟ್ಟಿಗೆ ಈಡೇರಿತು ಎಂಬುದು ಪ್ರಶ್ನೆ.

ಈಗಾಗಲೇ ಪದವಿ ತರಗತಿವರೆಗೆ ಕಲಿತಿರುವ ಜ್ಯೋತಿಪ್ರಭಾ ಕೆಲಸ ಸಿಕ್ಕದೆ ಉಳಿದಿದ್ದಾಳೆ. ಹತ್ತನೇ ತರಗತಿಕ್ಕಿಂತಲೂ ಹೆಚ್ಚು ಓದಿದವರು ತಕ್ಕ ಉದ್ಯೋಗ ಸಿಕ್ಕದೇ ತಾವು ಕಲಿಯಲೇ ಬಾರದಿತ್ತು, ಎಷ್ಟು ಕಲಿತರೂ ಇನ್ನೊಬ್ರ ಸೇವೆ ಮಾಡೋದು ತಪ್ಪಲಿಲ್ಲವೆನ್ನುತ್ತಾರೆ. ಸರಕಾರದ ಯೋಜನೆಗಳು ಕಾಗದ ಪತ್ರಗಳಿಗೇ ಸೀಮಿತವಾಗಿವೆ.

ಒಟ್ಟಾರೆ ಹೇಳುವುದಾದರೆ ಸಮಾಜದಲ್ಲಿ ಎದುರಿಸ ಬೇಕಾಗಿರುವ ದೌರ್ಜನ್ಯಗಳಿಗೆ ಹೆದರಿ ತಾನು ಕೊರಗ ಸಮುದಾಯಕ್ಕೆ ಸೇರಿದವಳೆಂದು ಎದೆ ತಟ್ಟಿ ಹೇಳಲಾರದ ಸ್ಥಿತಿಯಲ್ಲಿದ್ದಾಳೆ ಕೊರಗ ಮಹಿಳೆ. ಅವರಲ್ಲಿ ಆತ್ಮಾಭಿಮಾನ, ಆತ್ಮಸ್ಥೈರ್ಯ ಮೂಡಿಸಬೇಕಾಗಿದೆ. ಇತರ ಸಮುದಾಯದ ಎಷ್ಟೋ ಮಹಿಳೆಯರಿಗಿಂತ ಹೆಚ್ಚು ಸ್ವತಂತ್ರವಾಗಿ ವೈಯಕ್ತಿಕ ಬದುಕು ಸಾಗಿಸುತ್ತಿರುವ ಕೊರಗ ಮಹಿಳೆಯರಿಗೆ ಒಟ್ಟು ಸಮಾಜದ ಅಸ್ಪೃಶ್ಯತೆ, ತಾರತಮ್ಯಗಳಂತಹಾ ಕಡಿವಾಣಗಳು ತಪ್ಪಿಲ್ಲ.

*ಸಂಚಾರಿ : ಮಹಿಳಾ ಪರ ಚಿಂತನ ವೇದಿಕೆ, ಮಂಗಳೂರು*

*[ಒಂದಷ್ಟು ಜನ ಗೃಹಿಣಿಯರು, ಸಮಾಜ ಸೇವಾ ಕಾರ್ಯಕರ್ತೆಯರು, ಮಹಿಳಾ ಮಂಡಲದ ಸದಸ್ಯರು ಹೀಗೆ ಬೇರೆ ಬೇರೆ ಹಿನ್ನೆಲೆಯಿಂದ ಬಂದ ಮಹಿಳೆಯರು, ಮಹಿಳೆಯರ ಬಗ್ಗೆಯೇ ಆಪ್ತವಾಗಿ ಚರ್ಚಿಸಲು ಹುಟ್ಟಿ ಹಾಕಿಕೊಂಡ ಗುಂಪು 'ಸಂಚಾರಿ' ಕೊರಗ ಮಹಿಳೆ ಕುರಿತು ನಡೆದ ಚರ್ಚೆಯ ಬರಹ ರೂಪವೇ ಈ ಲೇಖನ.]*

# ನನ್ನ ಹೃದಯದೊಳಗಿನ ಹಿಂದುಳಿದ ಜಾತಿಗಳ ಪರವಾಗಿ ಉರಿಯುವ ಜ್ವಾಲೆ ನನ್ನ ಚಿತೆಯೊಂದಿಗೆ ತಣ್ಣಗಾಗುವುದು

ಬಡ ಆದಿವಾಸಿಗಳ ಜೀವನವನ್ನು ಅವರೊಂದಿಗೇ ಅವರ ಗುಡಿಸಲುಗಳಲ್ಲಿ ಬದುಕಿ, ಅವರ ಸಂಕಷ್ಟಗಳನ್ನು ಕಂಡು ಅನುಭವಿಸಿ ಅದೇ ಅನುಭವವನ್ನು ಬರಹವಾಗಿಸಿದ ಮಹಾಶ್ವೇತಾದೇವಿ - ಖ್ಯಾತ ಬಂಗಾಳ, ಹಿಂದಿ ಲೇಖಕಿ. ಸಿಕ್ಕ ಖ್ಯಾತಿ, ಪ್ರಶಸ್ತಿ ಪುರಸ್ಕಾರಗಳನ್ನೆಲ್ಲ ತಲೆಗೇರಿಸಿಕೊಳ್ಳದೆ ಆದಿವಾಸಿಗಳ ಹೋರಾಟಕ್ಕೆ ಬಳಸಿಕೊಂಡ ಶ್ರೇಷ್ಟ ವ್ಯಕ್ತಿ. ನಾರಿ ಸಂವಾದ ಎಂಬ ಹಿಂದಿ ದ್ವೈಮಾಸಿಕ ಮಹಿಳಾ ಪತ್ರಿಕೆಯಲ್ಲಿ ಪ್ರಕಟಗೊಂಡ ಮಹಾಶ್ವೇತಾದೇವಿಯವರೊಂದಿಗಿನ ಸಂದರ್ಶನವನ್ನು ಮಾನಸ ಓದುಗರಿಗಾಗಿ ಅನುವಾದಿಸಿ ಪ್ರಕಟಿಸಿದ್ದೇವೆ.

*ತಮ್ಮ ಹಾಗು ತಮ್ಮ ಪರಿವಾರದವರ ಬಗ್ಗೆ ಸ್ವಲ್ಪ ಹೇಳಿ.*

ನನ್ನ ಪರಿವಾರದವರು ಮಹಿಳೆಯರ ವಿಷಯವಾಗಿ ಸಾಕಷ್ಟು ಉದಾರವಾಗಿದ್ದರು. ಮಹಿಳೆಯರನ್ನು ಪ್ರತಿಷ್ಠೆಯ ದೃಷ್ಟಿಯಿಂದ ನೋಡಲಾಗುತ್ತಿತ್ತು. ನನ್ನ ಅಜ್ಜಿ ಆ ಕಾಲದಲ್ಲಿಯೇ ಒಂದು ಶಾಲೆಯನ್ನು ನಡೆಸುತ್ತಿದ್ದರು. ನನ್ನ ತಾಯಿಯೊಬ್ಬಳು ಕಲಾವಿದೆ, ತಂದೆ ಲೇಖಕರಾಗಿದ್ದರು. ನನ್ನ ಮಾವ ಸಚಿನ್ ಚೌಧರಿ 'ಇಕಾನಾಮಿಕ್ ಅಂಡ್ ಪೋಲಿಟಿಕಲ್ ವಿಕ್ಲಿಯ ಸ್ಥಾಪಕ ಸಂಪಾದಕರಾಗಿದ್ದರು. ಹೀಗೆ ಮನೆಯ ಇಡೀ ವಾತಾವರಣವೇ ಸಾಹಿತ್ಯ ಕಲೆಯಿಂದ ತುಂಬಿತ್ತು. ಅಂತಹ ವಾತಾವರಣದಲ್ಲಿ ನನ್ನ ಬಾಲ್ಯ ಆರಾಮವಾಗಿ ಕಳೆಯಿತು. ನಾನು 1936-38ವರೆಗೆ ಶಾಂತಿನಿಕೇತನದಲ್ಲಿದ್ದು ಇಂಗ್ಲೀಷ್ ಭಾಷೆಯಲ್ಲಿ ಬಿ.ಎ. ಆನರ್ಸ್ ಮುಗಿಸಿದೆ. ನಂತರ ಕಲ್ಕತ್ತಾ ವಿಶ್ವವಿದ್ಯಾಲಯದಲ್ಲಿ ಇಂಗ್ಲೀಷ್ ಎಂ.ಎ. ಮಾಡಿದೆ. 1949-50ರ ಅವಧಿಯಲ್ಲಿ ನಾನು ಸರ್ಕಾರಿ ನೌಕರಿಯನ್ನು ಮಾಡಿದೆ. ಆದರೆ ನನ್ನನ್ನು ಮಾರ್ಕ್ಸ್‌ವಾದಿ ಎಂದು ಕರೆದು ಕೆಲಸದಿಂದ ತೆಗೆದುಹಾಕಿದರು. ಆನಂತರವೇ ನಾನು ಶೋಷಣೆಯ ವಿರುದ್ಧ ಬರೆಯಲು ಪ್ರಾರಂಭಿಸಿದೆ.

*ತಮ್ಮ ಬದುಕು-ಬರಹ ಯಾರಿಂದ ಪ್ರಭಾವಿತವಾಗಿದೆ?*

ನಾನು ಇದುವರೆಗೂ ಯಾವ ರಾಜಕೀಯ ಥಿಯರಿಗಳನ್ನು ಓದಿಲ್ಲ. ಬಹುಶಃ ನನ್ನ ಬರಹಗಳನ್ನು ಓದಿ ಜನ ನನ್ನನ್ನು ಮಾರ್ಕ್ಸ್‌ವಾದಿ ಎಂದುಕೊಂಡರು. ನಾನು ಹಿಂದುಳಿದ, ಬಡ ವರ್ಗದ ಜನರ ಹಸಿವನ್ನು ಓದಿದೆ, ಬದುಕಿದೆ ಅದು ನನ್ನ ಬರವಣಿಗೆಯ ಥಿಯರಿಯಾಯ್ತು. ಒಮ್ಮೆ ಸಿಂಹಭೂಮಿ (ದ. ಬಿಹಾರ್)ಯಲ್ಲಿ ಆದಿವಾಸಿಗಳೊಂದಿಗೆ ಊಟಕ್ಕೆ ಕೂತೆ. ಎಲ್ಲರಿಗೂ ಅನ್ನದ ಜೊತೆ ಉಪ್ಪು ಮೆಣಸಿನಕಾಯಿ ಬಡಿಸಲಾಯ್ತು. ಆಗ ನಾನು ಅನ್ನದೊಂದಿಗೆ ಕಲೆಸಿ ತಿನ್ನಲು ಇನ್ನೇನಾದರೂ ಸಿಗುವುದೆ? ಎಂದು ಕೇಳಿದೆ. ಆಗ ಮಹಿಳೆಯೊಬ್ಬಳು ಅನ್ನವನ್ನು ಹಸಿವಿನೊಂದಿಗೆ ಕಲೆಸಿ ತಿನ್ನಲಾಗುವುದೆಂದಳು. ಆ ಮಹಿಳೆ ಆ ದಿನ ಆಡಿದ ಮಾತು ಇಲ್ಲಿಯವರೆಗಿನ ನನ್ನ-ಎಲ್ಲ ಬರಹಗಳಲ್ಲೂ ಅಚ್ಚೊತ್ತಿದೆ. ಆ ನಂತರ ಯಾವುದೆ ಥಿಯರಿ ಓದುವುದು ಅವಶ್ಯಕವೆಂದು ನನಗನಿಸಲಿಲ್ಲ.

*ಸಮಾಜದಲ್ಲಿ ಗಂಡು-ಹೆಣ್ಣಿನ ನಡುವಿನ ಅಂತರದ ಬಗ್ಗೆ ತಮ್ಮ ಯೋಚನೆ ಏನು?*

ಎಲ್ಲಿಯವರೆಗೆ ಪ್ರತಿ ವರ್ಗದ ನಡುವೆಯೂ ಸಮಾನತೆ ಮೂಡುವುದಿಲ್ಲವೊ ಅಲ್ಲಿಯವರೆಗೆ ಮಹಿಳೆಯ ಸ್ವಾತಂತ್ರ್ಯ ಸಾಧ್ಯವಾಗುವುದಿಲ್ಲ. ಎಲ್ಲಕ್ಕಿಂತ ಮೊದಲು ಬಡತನ ದಾರಿದ್ರ್ಯದಿಂದ ಮುಕ್ತರಾಗುವ ಬಗ್ಗೆ ಚಿಂತಿಸಬೇಕು. ನಮ್ಮ ದೇಶದ ಹೆಚ್ಚಿನ ಜನರು ಬಡತನ ರೇಖೆಯ ಕೆಳಗಿದ್ದಾರೆ. ಅಂತಹ ಸ್ಥಿತಿಯಲ್ಲಿ ಬರಿ ಮಹಿಳಾ ಸ್ವಾತಂತ್ರ್ಯದಿಂದ ಏನು ಪ್ರಯೋಜನ? ಮಹಿಳಾ ಅಭಿವೃದ್ಧಿಯ ಹೆಸರಿನಲ್ಲಿ ಸರ್ಕಾರವು ಕೋಟ್ಯಾಂತರ ರೂಪಾಯಿಗಳ ಯೋಜನೆಗಳನ್ನು ಪ್ರಾರಂಭಿಸಿದೆ. ಆದರೆ ಅದರ ಲಾಭ ಯಾವ ಹಿಂದುಳಿದ, ಬಡ ಮಹಿಳೆಯರಿಗೂ ತಲುಪುತ್ತಿಲ್ಲ. ಪ್ರತಿಯೊಬ್ಬ ಬಡ ಮಹಿಳೆಯೂ ಆರ್ಥಿಕವಾಗಿ ಸ್ವಾವಲಂಬಿಯಾಗುವುದು, ವಿದ್ಯಾವಂತಳಾಗುವುದು ಮಹಿಳಾ ಸ್ವಾತಂತ್ರ್ಯಕ್ಕೆ ಅತ್ಯವಶ್ಯಕ.

*ಪ್ರಸ್ತುತ ಕುಟುಂಬ ವ್ಯವಸ್ಥೆ ಮಹಿಳೆಯರ ಸ್ವಾತಂತ್ರ್ಯ, ಅಸ್ತಿತ್ವವನ್ನು ರಕ್ಷಿಸುತ್ತದೆಯೆ?*

ಹೆಣ್ಣು-ಗಂಡಿನ ನಡುವಿನ ಸಂಬಂಧವು ಒಂದು ಸ್ವಾಭಾವಿಕ ಪ್ರಕ್ರಿಯೆಯಾಗಿದೆ. ಇಬ್ಬರ ನಡುವಿನ ಸಂಬಂಧವು ಚೆನ್ನಾಗಿದ್ದರೆ ಮಕ್ಕಳು ಸುರಕ್ಷಿತರಾಗಿರುತ್ತಾರೆ ಅಲ್ಲದೆ ಕುಟುಂಬವು ಸುಭದ್ರವಾಗಿರುತ್ತದೆ. ಇದು ಇಡೀ ಸಮಾಜದ ಅಸ್ತಿತ್ವವನ್ನು ರಕ್ಷಿಸುತ್ತದೆ.

*ನೀವು ಯಾವ ಯಾವ ಜನಾಂದೋಲನ, ಸಂಘಟನೆಯಲ್ಲಿ ಪಾಲ್ಗೊಂಡಿದ್ದೀರಿ?*

ನಾನು ಬಿಹಾರ-ಬಂಗಾಳದ ಆದಿವಾಸಿಗಳೊಂದಿಗಿದ್ದು ಕೆಲಸ ಮಾಡಿದ್ದೇನೆ. ಅವರುಗಳ ಮೂಲಭೂತ ಸೌಲಭ್ಯಗಳು, ಮಾನವ ಹಕ್ಕುಗಳ ರಕ್ಷಣೆಗಾಗಿ ಅನೇಕ ಸಂಘಟನೆಗಳ ಜೊತೆಗೂಡಿ ಹೋರಾಟ ಮಾಡಿದ್ದೇನೆ. ಸಂತಾಲ್, ಮುಂಡಾ, ಲೋಧಾ ಶಬರರು, ಭಮಿಜ, ಖೇಡಿಯಾ ಶಬರ ಇಂತಹ ಅನೇಕ ಆದಿವಾಸಿ ಸಂಘಟನೆಗಳು, ಕಲ್ಯಾಣ ಸಮಿತಿಗಳು, ದುಡಿಮೆಗಾರರ ಸಂಘಟನೆಗಳ ಪ್ರಾರಂಭದಿಂದಲೂ ನಾನು ಇದ್ದು ಕೆಲಸ ಮಾಡುತ್ತಿದ್ದೇನೆ. 1981ರಲ್ಲಿ ಪಲಮು ಜಿಲ್ಲಾ ಬಂಧುವ ಮುಕ್ತಿ ಸಮಿತಿಯನ್ನು ಪ್ರಾರಂಭಿಸಲು ಸಹಾಯ ಮಾಡಿದೆ. ಆ ಮೂಲಕ ಬಂಧುವ ದುಡಿಮೆಗಾರರ ಕ್ಷೇಮಕ್ಕಾಗಿ ಅನೇಕ ಕೆಲಸಗಳನ್ನು ಮಾಡಲಾಯಿತು. ಬಂಧುವ ಜನರ ಸಮಸ್ಯೆ ಕುರಿತು ತುಂಬಾ ಬರೆದಿದ್ದೇನೆ. 1983ರಲ್ಲಿ ಪುರೂಲಿಯಾದಲ್ಲಿ ಪಶ್ಚಿಮವಂಗ ಖೇಡಿಯಾ ಶಬರರ ಕಲ್ಯಾಣ ಸಮಿತಿಯನ್ನು ಪ್ರಾರಂಭಿಸಲಾಯಿತು. ಆ ಸಮಿತಿಯ ಕಾರ್ಯಕಾರಿ ಅಧ್ಯಕ್ಷೆಣಿಯಾಗಿ ಕೆಲಸ ಮಾಡುತ್ತಿದ್ದೇನೆ. ಖೇಡಿಯಾ ಶಬರು ಈಗಲೂ ಸಮಾಜ ಮತ್ತು ಪೋಲಿಸರಿಂದ ಹುಟ್ಟು ಅಪರಾಧಿಗಳೆಂದು ಪರಿಗಣಿಸಲ್ಪಡುತ್ತಾರೆ. ಹಾಡು ಹಗಲಲ್ಲೆ ಅವರು ಹತ್ಯೆಯಾಗುತ್ತಾರೆ. ಮಾನವ ಹಕ್ಕುಗಳಿಂದ ವಂಚಿಸಲ್ಪಟ್ಟ ಅವರು ಅತ್ಯಂತ ಬಡವರು, ನಾನು ಪ್ರಾರಂಭಿಸಿದ ಸಮಿತಿಗೆ ಭಾರತ ಸರ್ಕಾರವೂ ಸ್ವಲ್ಪ ಸಹಾಯ ನೀಡಿರುವುದರಿಂದ ಅವರು ಕರಕುಶಲ ವಸ್ತುಗಳನ್ನು ತಯಾರಿಸಲು ಪ್ರಾರಂಭಿಸಿದ್ದಾರೆ. ಮರಗಳನ್ನು ನೆಡುತ್ತಾರೆ. ಕುಡಿವ ನೀರಿಗಾಗಿ ಬಾವಿಗಳನ್ನು ತೋಡಲಾಗಿದೆ. ಹೀಗೆ ಒಟ್ಟಾಗಿ ಸೇರಿ ಬದುಕಿಗಾಗಿ ಹೋರಾಟ ನಡೆಸಿದ್ದಾರೆ. ಇವರುಗಳ ಬಗ್ಗೆಯೂ ನಾನು ಸಾಕಷ್ಟು ಬರೆದಿದ್ದೇನೆ.

*ನಿಮ್ಮ ಬರಹಗಳಿಂದಾಗಿ ಅವರ ಜೀವನದಲ್ಲಿ ಬದಲಾವಣೆ ಉಂಟಾಗಿದೆಯೆ?*

ನಾನೊಬ್ಬಳು ಬದ್ಧ ಲೇಖಕಿ. ಬದಲಾವಣೆ ತರುವ ಜವಾಬ್ದಾರಿಯನ್ನೇನು ನಾನು ಹೆಗಲ ಮೇಲೊತ್ತುಕೊಂಡಿಲ್ಲ. ದಲಿತರು, ಪೀಡಿತ ಜನಕ್ಕೆ ನಾನೆಷ್ಟು ಮಾಡಬಲ್ಲೇನೊ ಅಷ್ಟನ್ನಷ್ಟೆ ನಾನು ಯೋಚಿಸಬಲ್ಲೆ.

*ಆದಿವಾಸಿ ಜನಾಂಗದಲ್ಲಿ ಮಹಿಳೆಯರನ್ನು ಮುದುಕಿಯರನ್ನ ಮಾಟಗಾತಿಯರೆಂದು ಕರೆದು ಅವರನ್ನು ಸಾಯಿಸುವ ಇಲ್ಲ ಅವರ ಆಸ್ತಿಯನ್ನು ಲಪಟಾಯಿಸುವ ಆಚರಣೆ ಇದೆ. ಇದನ್ನು ಹೇಗೆ ತಡೆಯಬಹುದು?*

ಸಂತಾಲಿ ಮತ್ತು ಮುಂಡಾ ಆದಿವಾಸಿ ಮಹಿಳೆಯರಿಗೆ ಆಸ್ತಿಯ ಅಧಿಕಾರವಿಲ್ಲ. ಅವರ ಪುರಾತನ ಸಾಮಾಜಿಕ ಆಚರಣೆಗಳಲ್ಲಿ ಮಹಿಳೆಯರು ಆಸ್ತಿಯ ಹಕ್ಕು ಹೊಂದುವಂತಿಲ್ಲ. ಆಸ್ತಿ ಹಕ್ಕಿಗಾಗಿ ಆದಿವಾಸಿ ಮಹಿಳೆಯರೆಲ್ಲರೂ ಒಟ್ಟಾಗಿ ಹೋರಾಟ ನಡೆಸಬೇಕು, ಆ ಮೂಲಕ ಅಧಿಕಾರ ಪಡೆಯಬೇಕು. ಆದರೆ ಪಶ್ಚಿಮ ಬಂಗಾಳದಲ್ಲಿ ಗಂಡು ಮಕ್ಕಳಿಲ್ಲದಿದ್ದರೆ ಆಸ್ತಿಯನ್ನು ಹೆಣ್ಣು ಮಗಳಿಗೆ ನೀಡಬಹುದು. ಹೆಣ್ಣು ಮಕ್ಕಳಿಗೆ ಆಸ್ತಿಯ ಹಕ್ಕು ಸಿಕ್ಕರೆ ಮಾಟಗಾರ್ತಿ ಹತ್ಯೆ ಆಚರಣೆ ತಾನೇ ತಾನಾಗಿ ಹೋಗಬಹುದು. 13 ವರ್ಷದ ಹಿಂದೆ ಪುರೂಲಿಯಾದಲ್ಲಿ ಡಾಯಿನ್ (ಮಾಟಗಾತಿ) ಹೆಸರಿನಲ್ಲಿ ಸಾಕಷ್ಟು ಹತ್ಯೆಗಳಾದವು. ಶಾರದ ಪ್ರಸಾದ್ ಎಂಬ ಅಧ್ಯಾಪಕ ಮತ್ತು ಸಾಮಾಜಿಕ ಕಾರ್ಯಕರ್ತರೊಬ್ಬರು ಈ ಮೂಢನಂಬಿಕೆಯ ವಿರುದ್ಧ ಹೋರಾಟ ನಡೆಸಿದರು. ಅವರ ಹಾಗು ಅವರ ಅನುಯಾಯಿಗಳ ಹೋರಾಟದಿಂದಾಗಿ ಈ ಆಚರಣೆ ಕಡಿಮೆಯಾಯಿತು.

*ತಮ್ಮ ಸಂಸ್ಥೆಯೂ ಆದಿವಾಸಿ ಮಹಿಳೆಯರಿಗಾಗಿ ಏನು ಕೆಲಸ ಮಾಡಿದೆ?*

ಹೌದು, ನಮ್ಮ ಪುಟ್ಟ ಸಂಸ್ಥೆಯು ಪ್ರೌಢ ಮಹಿಳೆಯರಿಗಾಗಿ ಶಿಕ್ಷಣ ಪ್ರಸಾರದ ಕೆಲಸವನ್ನು ಮಾಡುತ್ತಿದೆ ಅಲ್ಲದೆ ಅವರ ಇತರೆ ಸಮಸ್ಯೆಗಳಿಗೂ ಪರಿಹಾರ ಹುಡುಕುವ ಪ್ರಯತ್ನವನ್ನು ಮಾಡುತ್ತಿದೆ.

*ತಮ್ಮ ದೃಷ್ಟಿಯಲ್ಲಿ ಆದಿವಾಸಿ ಸಮಾಜ ಮತ್ತು ಭಾರತೀಯ ಸಮಾಜದ ಮಹಿಳೆಯರ ನಡುವೆ ಅಂತರವೇನಿದೆ?*

ಆದಿವಾಸಿ ಸಮಾಜದಲ್ಲಿ ಮಹಿಳೆಯರಿಗೆ ವಿಶೇಷ ಗೌರವವಿದೆ. ತನ್ನ ಜೀವನ ಸಂಗಾತಿಯನ್ನು ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರ್ಯ ಆದಿವಾಸಿ ಹೆಣ್ಣು ಮಕ್ಕಳಿಗಿದೆ. ಹೆಣ್ಣು ಮಕ್ಕಳ ಮದುವೆಯಲ್ಲಿ ತಾಯಿ ಪ್ರಮುಖಳು. ವಿವಾಹದ ಆಚರಣೆಯಲ್ಲಿ ವಧುವಿನ ಗೆಳತಿಯರು ಪ್ರಮುಖ ಪಾತ್ರ ವಹಿಸುತ್ತಾರೆ. ವರದಕ್ಷಿಣೆಯಂಥ ನೀಚ ಆಚರಣೆ ಆದಿವಾಸಿ ಸಮಾಜದಲ್ಲಿಲ್ಲ. ಕೇವಲ ಒಂದೆ ಜೊತೆ ಬಟ್ಟೆಯೊಂದಿಗೆ ವಧು ಗಂಡಿನ ಮನೆಗೆ ಹೋಗುತ್ತಾಳೆ. ಆದಿವಾಸಿ ಸಮಾಜದಲ್ಲಿ ಒಂದು ಜನಪದ ಕಥೆ ಪ್ರಚಲಿತದಲ್ಲಿದೆ. ಒಬ್ಬ ವರ ವಿವಾಹದ ಸಮಯದಲ್ಲಿ 600 ರೂ.ವನ್ನು ವರದಕ್ಷಿಣೆಯಾಗಿ ಕೇಳಿದನಂತೆ, ಕೇಳಿದರ ಪರಿಣಾಮವಾಗಿ ಮಾರನೇ ದಿನ ಅವನಿಗೆ 6 ತಲೆ, 6 ಕೈ, 6 ಕಾಲುಗಳು ಹುಟ್ಟಿಕೊಂಡವಂತೆ.

*ತಮ್ಮ ಮುಂದಿನ ಯೋಜನೆಗಳೇನು?*

ಸಾಯುವ ತನಕ ಬಡ ಆದಿವಾಸಿಗಳ ಶೋಷಣೆಯ ವಿರುದ್ಧ ಹೋರಾಡುವೆ. ಬಹಳ ವರ್ಷಗಳಿಂದ ನನ್ನ ಹೃದಯದೊಳಗೆ ಹಿಂದುಳಿದ ಜಾತಿಗಳ ಪರವಾಗಿ ಉರಿಯುತ್ತಿರುವ ಜ್ವಾಲೆಯು ನನ್ನ ಚಿತೆಯೊಂದಿಗೆ ತಣ್ಣಗಾಗುವುದು!

●

# ಆದಿವಾಸಿಗಳಲ್ಲಿ ಹೆಚ್ಚುತ್ತಿರುವ ಬಹುಪತ್ನಿತ್ವ

ಮಂಜುಕವಿದ ಚಳಿಗಾಲದ ಒಂದು ಮುಂಜಾನೆ ಸೈಟ್‌ಕೂಯಿ ತನ್ನ ಗುಡಿಸಲಿನಿಂದ ಹೊರಬಂದಳು. ದೇಹವನ್ನು ಪೂರ್ತಿಯಾಗಿ ಮುಚ್ಚದಷ್ಟು ಹರುಕುಬಟ್ಟೆ. ಕೊರೆಯುವ ಚಳಿಗಿಂತ ತೀವ್ರವಾಗಿ ಕೊರೆಯುವ ಹಸಿವೆ. ಹಿಂದಿನ ದಿನ ಬರಿ ನೀರಿನಿಂದಷ್ಟೆ ಹೊಟ್ಟೆ ತುಂಬಿಸಿಕೊಂಡಿದ್ದಳು. 45 ವರ್ಷದ ಸೈಟ್‌ಕೂಯಿ ಜುಡುಗುಡಾ ಪಂಚಾಯ್ತಿಗೆ ಸೇರುವ ಚಾಯ್‌ಕೊಚ ಹಳ್ಳಿಯವಳು. ಹೆರಲಿಲ್ಲ ಎಂಬ ಕಾರಣಕ್ಕೆ 12 ವರ್ಷಗಳ ಹಿಂದೆ ಗಂಡ ಮಹೇಂದ್ರ ಬಾರಿ ಮನೆಯಿಂದ ಆಕೆಯನ್ನು ಹೊರಹಾಕಿದ್ದ. ಯುರೇನಿಯಂ ಕಾರ್ಪೊರೇಷನ್ ಆಫ್ ಇಂಡಿಯಾ ಲಿ.,ನಲ್ಲಿ ಕೆಲಸ ಮಾಡುವ ಮಹೇಂದ್ರ ಮತ್ತೊಂದು ಮದುವೆಯಾಗಿದ್ದಾನೆ. ಸೈಟ್‌ಕೂಯಿಯನ್ನು ಸಂಕಷ್ಟಕ್ಕೆ ತಳ್ಳಿ ಹೊಸ ಹೆಂಡತಿಯೊಂದಿಗೆ ಕಂಪನಿಯ ವಸತಿ ಗೃಹಕ್ಕೆ ಹೊರಟು ಹೋದ.

ಮಗುವನ್ನು ದತ್ತು ತೆಗೆದುಕೊಳ್ಳೋಣವೆಂದು ಕೇಳಿಕೊಂಡೆ, ಅದಕ್ಕೆ ಸಮ್ಮತಿಸದ ಗಂಡ ದಿನವೂ ಕೋಲಿನಿಂದ, ಗಣಿಯೊಳಗೆ ಉಪಯೋಗಿಸುವ ಬೂಟಿನಿಂದ ಹೊಡೆಯುತ್ತಿದ್ದ ಎಂದು ನೆನಪಿಸಿಕೊಳ್ಳುತ್ತಾಳೆ ಆಕೆ. ಅಲ್ಲಿ ಇಲ್ಲಿ ಕೆಲಸ ಮಾಡಿ ದಿನ ತಳ್ಳುವ ಅವಳಿಗೆ ಹೋಗಲು ಯಾವ ಜಾಗವೂ ಇಲ್ಲ. ಹಳ್ಳಿಗರು ನನ್ನೊಂದಿಗೆ ಚೆನ್ನಾಗಿದ್ದಾರೆ ಎನ್ನುತ್ತಾಳೆ. ಬಾರಿ ಯಾವ ಕಾರಣಕ್ಕಾಗಿ ಮತ್ತೊಮ್ಮೆ ಮದುವೆಯಾದನೊ ಅದೇನು ಅವನಿಗೆ ಫಲಿಸಲಿಲ್ಲ. ಅವನಿಗಿನ್ನು ಮಕ್ಕಳಾಗಿಲ್ಲ.

ಬಿಹಾರದ ಪೂರ್ವಸಿಂಘ್ ಭೂಮಿಗೆ ಸೇರುವ ಜುಡುಗುಡಾದಲ್ಲಿ ಸೈಟ್‌ಕೂಯಿಯಂತೆ ಮಕ್ಕಳಾಗದ ಕಾರಣಕ್ಕೆ ಹಿಂಸಿಸಲ್ಪಟ್ಟು, ಹೊರದೂಡಲ್ಪಟ್ಟ ಮಹಿಳೆಯರು ಅನೇಕರಿದ್ದಾರೆ. ಈ ಪ್ರದೇಶದಲ್ಲಿ 1960ರಿಂದ UCILನವರು ಗಣಿಗಳಿಂದ ಯುರೇನಿಯಂ ಅದಿರು ತೆಗೆದು, ಅದನ್ನು ರೇಡಿಯೋ ವಿಕಿರಣವುಳ್ಳ ಹಳದಿ ಬಣ್ಣದ ಬಿಲ್ಲೆಗಳನ್ನಾಗಿ ಅಥವಾ ಮ್ಯಾಂಗನೀಸಿಯಂ ಡೈರನೇಟ್ ಮಾಡುವ ಕೆಲಸ ಕೈಗೊಂಡಿದೆ. UCILನವರು ನ್ಯೂಕ್ಲಿಯರ್ ಕಸವನ್ನು ಎಸೆಯುವ ಕೊಳಗಳ ಸಮೀಪದಲ್ಲೆ 22 ವರ್ಷದ ಸಾಕ್ರೊ ಮಚ್‌ಹಿನ್ ವಾಸಿಸುತ್ತಾಳೆ. ಸಂತಾಲ್ ಆದಿವಾಸಿಯಾದ ಸಾಕ್ರೊಳನ್ನು 4 ತಿಂಗಳ ಹಿಂದೆ ಅವಳ ಗಂಡ ಕರುಮರ್ಮು ಮಗು ಹೆರಲಿಲ್ಲ ಎಂಬ ಕಾರಣಕ್ಕೆ ಅವಳ ತಂದೆ ತಾಯಿಯ ಮನೆಯಲ್ಲೆ ಆಕೆಯನ್ನು ಬಿಟ್ಟು ಹೊರಟು ಹೋದ. ಅವಳ ಗಂಡ ಮತ್ತು ಅತ್ತೆ ಮಾವಂದಿರಿಗೆ ಆಕೆ ಎತ್ತಿಗಿಂತಲೂ ಕಡೆಯಂತೆ. ಎತ್ತು ಸಗಣಿಯನ್ನಾದರು ಉತ್ಪಾದಿಸುತ್ತದೆ, ಆಕೆ ಅದಕ್ಕೂ ಕೀಳು ಎಂಬ ಭಾವನೆ ಅವರದು. ಮದುವೆಯಾಗಿ 6 ವರ್ಷವಾದರೂ ಆಕೆಗೆ ಮಕ್ಕಳಾಗಲಿಲ್ಲ. ಮದುವೆಯಾಗಿ 2 ವರ್ಷದ ಮೇಲೆ ಕರು ನಿತ್ಯವೂ ಹೊಡೆಯುತ್ತಿದ್ದ. ಊಟ ನೀಡದೆ ಕೋಣೆಯೊಳಗೆ ಅವಳನ್ನು ಕೂಡಿ ಹಾಕುತ್ತಿದ್ದ. ಆಕೆ ಅನೇಕ ಭಾರಿ ಗ್ರಾಮದ ಸರಪಂಚನೊ, ಪುರೋಹಿತನನ್ನು ಆಶ್ರಯಕ್ಕಾಗಿ ಮೊರೆ ಹೋಗಿದ್ದಳು. ಮನೆ ಕೆಲಸ ಮಾಡಿಯೊ, ಸೌದೆ ಮಾರಿಯೋ ಊಟ ಮಾಡಿದ್ದಳು. ಗಂಡ ಬಿಟ್ಟು ಹೋದ ಮೇಲೆ ತಂದೆ, ಅಣ್ಣಂದಿರ ಆಶ್ರಯ ಪಡೆದ ಸಾಕ್ರೊ, ನನ್‌ಕಿಕ್ಕೂಗಿಂತಲೂ ಪುಣ್ಯವಂತಳು.

40 ವರ್ಷದ ನನ್‌ಕಿಕ್ಕೂ ಟಿಲ್ಕೈಟಾಂಡ್ ಗ್ರಾಮದವಳು. ಬಂಜೆ ಎಂಬ ಕಾರಣಕ್ಕೆ ಗಂಡ ಗುಮ್‌ಡಿ ಹೊ ಒದ್ದು ಹೊರಗೆ ಹಾಕಿದ. ಅಣ್ಣಂದಿರ ಆಶ್ರಯವೂ ಸಿಕ್ಕದೆ ನನ್‌ಕಿಕ್ಕೂ ಮತ್ತೆ ಗಂಡನ ಬಳಿ ಬರಬೇಕಾಯ್ತು 'ಬಂಜೆಯನ್ನು ಕೀಳೆಂದು ಕಾಣುತ್ತಾರೆ. ಜನ ಅವಳನ್ನು ಇಷ್ಟ ಪಡುವುದಿಲ್ಲ" ಎಂದು ನೊಂದು ನುಡಿಯುತ್ತಾಳೆ. ಹಿಂಸೆಯನ್ನು ಸಹಿಸಿಕೊಂಡು ಗಂಡನೊಂದಿಗೆ ಇರುವ ನನ್‌ಕಿ ಬೇರೆಲ್ಲಿ ಹೋಗಲಿ? ಎಂದು ಕೇಳುತ್ತಾಳೆ.

ಎಲ್ಲಿಗೆ ಹೋಗುವುದು? ಎಂಬ ಪ್ರಶ್ನೆ 25 ವರ್ಷದ ಬಸಂತಿ ಸೋರೆನ್‌ಳನ್ನೂ ಕಾಡುತ್ತಿದೆ. ನನ್‌ಕಿಯ ಹಳ್ಳಿಗೆ ಸೇರಿದ ಬಸಂತಿಗೂ ಮದುವೆಯಾಗಿ 2 ವರ್ಷವಾದರೂ ಇನ್ನೂ ಮಕ್ಕಳಿಲ್ಲ. ನಾನು ಮತ್ತೆ ಮದುವೆಯಾಗುತ್ತೇನೆ. ವಯಸ್ಸಾದ ಕಾಲದಲ್ಲಿ ನೋಡಿಕ್ಕೊಳ್ಳಲು ಮಕ್ಕಳು ಬೇಡವೆ ಎಂದು ಗಂಡ ಸಿಕೋನ್ ಹೇಳುತ್ತಿದ್ದರೆ ಉತ್ತರವಾಗಿ ಬಸಂತಿ ಕಣ್ಣೀರಿಡುತ್ತಾಳೆ. ಮೊದಲ ಗಂಡನಿಂದಲೂ ಮಕ್ಕಳಾಗಲಿಲ್ಲ ಎಂಬ ಕಾರಣಕ್ಕೆ ಹೊರದೂಡಲ್ಪಟ್ಟ ಬಸಂತಿಗೆ ಇದು ಎರಡನೇ ಮದುವೆ.

ಅನಕ್ಷರತೆ, ಮೌಢ್ಯದ ಜೊತೆಗೆ ರೇಡಿಯೋ ವಿಕಿರಣದ ಪರಿಣಾಮ ನಿಧಾನವಾಗಿ ಆದಿವಾಸಿಗಳ ಮೇಲೆ ಆಗುತ್ತಿದೆ. ಹೆಚ್ಚು ಕಡಿಮೆ ಏಕಪತ್ನಿತ್ವವೇ ಜಾರಿಯಲ್ಲಿದ್ದ ಅವರ ಸಮಾಜದಲ್ಲಿ ಬಹುಪತ್ನಿತ್ವ ಹೊಸ ಬೆಳವಣಿಗೆ. ಬಂಜೆ ಎಂಬ ಕಾರಣಕ್ಕೆ ಹೆಂಡತಿಯರನ್ನು ಹೊರದೂಡುವುದು ಇಲ್ಲ ಮತ್ತೆ ಮದುವೆಯಾಗುವುದು ಹೆಚ್ಚುತ್ತಿದೆ. UCILನ ಗಣಿ ಮತ್ತು ಕಾರ್ಖಾನೆಯ ಸಮೀಪವಿರುವ ಹಳ್ಳಿಗಳಲ್ಲಿ ಇದು ಹೆಚ್ಚುತ್ತಿದೆ ಎಂದು ಅಲ್ಲಿನ ಸಾಮಾಜಿಕ ಕಾರ್ಯಕರ್ತರಾದ ಘನಶ್ಯಾಂ ಬಿರುಲಿ ಹೇಳುತ್ತಾರೆ. ಆದರೆ UCILನ ಆಡಳಿತ ವರ್ಗದವರು ಯಾವುದೇ ರೇಡಿಯೋ ವಿಕಿರಣದ ಪರಿಣಾಮವನ್ನು ಅಲ್ಲಗೆಳೆಯುತ್ತಾರೆ. ಬಂಜೆತನಕ್ಕೆ ಬೇರೆಯೇ ಕಾರಣವಿರಬಹುದೆಂದು ವಾದಿಸುತ್ತಾರೆ. ಬೇರೆಯೇ ಕಾರಣವಿದ್ದರೆ ಈ ಪ್ರದೇಶದಲ್ಲಷ್ಟೆ ಈ ಸಮಸ್ಯೆ ಹೇಗೆ ಹುಟ್ಟಿಕೊಂಡಿತು ಎಂಬುದು ಪ್ರಶ್ನೆಯಾಗೇ ಉಳಿದಿದೆ. ಅಥವಾ ಕೈಗಾರೀಕರಣ, ಅಭಿವೃದ್ಧಿಗಾಗಿ ನಿರಪರಾಧಿ, ಹೆಂಗಸರು ಬಲಿಯಾಗುವುದು ದೊಡ್ಡ ವಿಷಯವೇನಲ್ಲವಲ್ಲ!

*ಕೃಪೆ : ಟೈಮ್ಸ್ ಆಫ್ ಇಂಡಿಯಾ*

# ಮನವಿ

ಜೂನ್ 23, 1997ರಂದು, ಮಧ್ಯಪ್ರದೇಶದ ದರ್ಗ್‌ನ ಅಡಿಷನಲ್ ಸೇಶನ್ಸ್ ನ್ಯಾಯಾಲಯದ ನ್ಯಾಯಾಧೀಶರಾದ ಶ್ರೀ ಟಿ. ಕೆ. ಜಾ ಅವರು ಮಹತ್ತರವಾದ ತೀರ್ಪನ್ನಿತ್ತರು. ಅದೆಂದರೆ ಮಹಾನ್ ಕಾರ್ಮಿಕ ನಾಯಕ ಶಂಕರ್‌ಗುಹಾ ನಿಯೋಗಿ ಅವರ ಹತ್ಯೆಗೆ ಸಂಬಂಧಿಸಿದ್ದು. ಆ ಪ್ರಕರಣದಲ್ಲಿ ಪಲ್ಟನ್ ಮಲ್ಲಾಗೆ ಮರಣದಂಡನೆಯನ್ನು ಹಾಗು ಇತರ ಐವರಿಗೆ ಜೀವಾವಧಿ ಶಿಕ್ಷೆಯನ್ನು ವಿಧಿಸಿದರು. ಆ ಐವರಲ್ಲಿ ಇಬ್ಬರು ಸಿಂಪ್ಲೆಕ್ಸ್ ಗ್ರೂಫ್ ಆಫ್ ಇಂಡಸ್ಟ್ರೀಸ್ ವಾಣಿಜ್ಯೋದ್ಯಮಿಗಳಾದ ಮೂಲ್‌ಚಂದ್ ಶಾ ಹಾಗು ಚಂದ್ರಕಾಂತ್ ಶಾ. ಇವರಿಬ್ಬರಿಗೂ ತಲಾ ಹತ್ತು ಲಕ್ಷ ರೂ.ಗಳ ದಂಡ ಹಾಗು ಉಳಿದ ಮೂವರಾದ ಗ್ಯಾನ್ ಪ್ರಕಾಶ್ ಮಿಶ್ರ, ಅಭಯ್‌ಸಿಂಗ್ ಮತ್ತು ಅವದೇಶ್‌ರಾಯ್‌ಗೆ ತಲಾ 2,000/- ರೂ. ದಂಡ ವಿಧಿಸಲಾಯಿತು. ಅದರಲ್ಲಿ ರೂ. ಹತ್ತು ಲಕ್ಷವನ್ನು ಶಂಕರ್ ಗುಹಾ ನಿಯೋಗಿಯವರ ಪತ್ನಿ ಮತ್ತು ಮೂವರು ಮಕ್ಕಳಿಗೆ ಸಮನಾಗಿ ಹಂಚಿ 5 ವರ್ಷಗಳ ಅವಧಿಗೆ ಒಂದು ಯೋಜನೆಯಡಿಯಲ್ಲಿ ವಿನಿಯೋಗಿಸಲು ಯೋಚಿಸಲಾಗಿತ್ತು. ಹಾಗೆ ಮಾಡುವ ಮೂಲಕ ತಿಂಗಳ ವೆಚ್ಚಕ್ಕೆ ಹಣ ದೊರೆಯುವಂತಾಗುತ್ತಿತ್ತು.

ಹಿಂದೆ 1991ರಲ್ಲಿ ದರ್ಗ್ ಜಿಲ್ಲೆಯ ಭಿಲಾಯ್‌ನಲ್ಲಿ ಸೆಪ್ಟೆಂಬರ್ 28ರಂದು ಛತ್ತಿಸ್‌ಗರ್‌ನ ಜನಪ್ರಿಯ ಕಾರ್ಮಿಕ ನಾಯಕ ಶಂಕರ್ ಗುಹಾ ನಿಯೋಗಿಯವರನ್ನು ಕೊಲೆಗೈಯಲಾಗಿತ್ತು. ದೇಶಾದ್ಯಂತ ಜನಪರ ಸಂಘಟನೆಗಳು, ವ್ಯಕ್ತಿಗಳು ಹತ್ಯೆಯನ್ನು ಖಂಡಿಸಿ ನ್ಯಾಯ ಕೇಳಿದ್ದವು. ಅದರ ಪರಿಣಾಮವಾಗಿ ಹತ್ಯೆಯ ಪ್ರಕರಣವನ್ನು ಸಿ.ಬಿ.ಐ.ನವರಿಗೆ ಒಪ್ಪಿಸಲಾಗಿತ್ತು.

ನ್ಯಾಯಾಲಯವು ನೀಡಿದ ತೀರ್ಪು ಸಾರ್ವಜನಿಕರಲ್ಲಿ ಸಂತೋಷವನ್ನುಂಟು ಮಾಡಿತ್ತು. ಹಾಗೂ ಮುಂದಿನ ಘಟನೆಗಳ ಬಗ್ಗೆ ಆಸಕ್ತಿ ಕೆರಳಿಸಿತ್ತು. ಸಾರ್ವಜನಿಕರ ಆಸಕ್ತಿಗಾಗಿ 184 ಪುಟಗಳ, ಹಿಂದಿ ಭಾಷೆಯಲ್ಲಿರುವ ತೀರ್ಪನ್ನು ಛತ್ತಿಸ್‌ಗರ್ ಇನ್‌ಸ್ಟಿಟ್ಯೂಟ್ ಆಫ್ ಲಾನವರು ಪ್ರಕಟಿಸಿದ್ದರು. ಇಂಗ್ಲೀಷ್ ಅನುವಾದವು ಪ್ರಕಟಣೆಯಲ್ಲಿದೆ.

ಆಪಾದಿತರು ಮಧ್ಯ ಪ್ರದೇಶದ ಹೈಕೋರ್ಟ್ (ಜಬ್ಬಲ್‌ಪುರ)ನಲ್ಲಿ ಅಪೀಲು ಮಾಡಿಕೊಂಡಿದ್ದಾರೆ. ಇಬ್ಬರು ನ್ಯಾಯಾಧೀಶರು ಶ್ರೀ ಎಸ್. ಕೆ. ದುಬೆ ಹಾಗೂ ಶ್ರೀಮತಿ ಉಷಾ ಶುಕ್ಲಾ ಅವರನ್ನೊಳಗೊಂಡ ನ್ಯಾಯಪೀಠವು ಜುಲೈ 31, 1997ರಂದು ಎರಡು ಪಕ್ಷಗಳ ಪೀರ್ಯಾದನ್ನು ಕೇಳಿ ಶಿಕ್ಷೆಯನ್ನು ಅಮಾನತ್ತುಗೊಳಿಸುವುದನ್ನು ನಿರಾಕರಿಸಿದರು ಮತ್ತು ಪುರಾವೆಗಳನ್ನ ವಿವರವಾಗಿ ವಿಚಾರಣೆ ನಡೆಸದ ಹೊರತು ಜಾಮೀನನ್ನು ನೀಡಲು ನಿರಾಕರಿಸಿದರು. ಮುಂದಿನ ವಿಚಾರಣೆಯನ್ನು ಸೆಪ್ಟೆಂಬರ್ 8ರಂದು ನಡೆಸಲಾಯ್ತು. ವಿಚಾರಣೆ ಇನ್ನೂ ಮುಂದುವರೆದಿದೆ. ವಿಚಾರಣೆ ಮುಂದುವರೆದು ತೀರ್ಪು ಸಿಕ್ಕಿದ ಮೇಲೂ ಅಪರಾಧಿಗಳು ಸುಪ್ರೀಂ ಕೋರ್ಟಿಗೆ ಅಪೀಲು ಹೋದರು ಆಶ್ಚರ್ಯವೇನಿಲ್ಲ. ಹಣ ಸುರಿವ ತಾಕತ್ತುಳ್ಳ ಅಪರಾಧಿಗಳಿಗೆ ಸುಪ್ರೀಂ ಕೋರ್ಟ್ ದೂರವೇನಾಗುವುದಿಲ್ಲ.

ಪ್ರಕರಣಕ್ಕೆ ಸಂಬಂಧಿಸಿದ ಕಾನೂನಿನ ಪ್ರಕ್ರಿಯೆಯನ್ನು ಎಡಬಿಡದೆ ನಿಗಾ ವಹಿಸಲು ಕಾಳಜಿಯುಳ್ಳ ಹಿರಿಯ ವಕೀಲರು ಸಹಕರಿಸುತ್ತಿದ್ದಾರೆ. ಅಲ್ಲದೆ ಪ್ರಕರಣಕ್ಕೆ ಸಂಬಂಧಿಸಿದ ನ್ಯಾಯಾಂಗ ಕ್ರಿಯೆಯನ್ನು ಫಾಲೊ ಆಫ್ ಮಾಡಲು ಹಣದ ಅವಶ್ಯಕತೆಯಿದೆ. ಅದರಲ್ಲಿ ಪ್ರಯಾಣ, ತೀರ್ಪಿನ ಹಾಗೂ ವಿಚಾರಣೆಯ ಇಂಗ್ಲೀಷ್ ಅನುವಾದದ ಪ್ರಕಟಣೆ, ಜೆರಾಕ್ಸ್, ಮುದ್ರಣ, ಸಭೆಗಳು, ಸಮಾಲೋಚನೆಯ ಇತ್ಯಾದಿ ವೆಚ್ಚಗಳೂ ಇವೆ.

ವಿಚಾರಣೆಯ ಬಗ್ಗೆ ಸಾರ್ವಜನಿಕರಿಗಿರುವ ಆಸಕ್ತಿಯನ್ನು ಗಮನದಲ್ಲಿರಿಸಿಕೊಂಡು ಎಲ್ಲಾ ಪ್ರಜಾಸತ್ತಾತ್ಮಕ ಸಂಘಟನೆಗಳಿಗೂ, ಕಾನೂನಿನಲ್ಲಿ ನಂಬಿಕೆ ಇರಿಸಿರುವ ನಾಗರೀಕರಿಗೂ "ಶಹೀದ್ ನಿಯೋಗಿ ಮರ್ಡರ್ ಟ್ರಯಲ್ ಲೀಗಲ್ ಫಂಡ್"ಗೆ ಸಹಾಯಧನ ನೀಡಬೇಕೆಂದು ಮನವಿ ಮಾಡಿಕೊಳ್ಳುತ್ತೇವೆ.

*ಹೋರಾಟದಲ್ಲಿ ಬೆಂಬಲಿಗರಾಗಿ*

ಸ್ವಾಮಿ ಅಗ್ನಿವೇಶ್ (ಅಧ್ಯಕ್ಷರು, ಬಂಧುಮುಕ್ತಿ ಮೋರ್ಚಾ), ಶಮ್‌ಶೇರ್‌ಸಿಂಗ್ ಬಿಷ್ಟ್ (ಉತ್ತರ್‌ಕಾಂಡ್ ಸಂಘರ್ಷ್‌ವಾಹಿನಿ), ಮೇಧಾ ಪಾಟ್ಕರ್ (ನರ್ಮದಾ ಬಚಾವ್ ಆಂದೋಲನ್ ಮತ್ತು ನ್ಯಾಶನಲ್ ಅಲೈಯನ್ಸ್ ಫಾರ್ ಪೀಪಲ್ಸ್ ಮೂವ್‌ಮೆಂಟ್), ಅಬ್ದುಲ್ ಜಬ್ಬರ್‌ಖಾನ್ (ಭೂಪಾಲ್ ಗ್ಯಾಸ್ ಪೀಡಿತ್ ಮಹಿಳಾ ಉದ್ಯೋಗ್ ಸಂಘಟನ್), ಡಿ. ತಂಕಪ್ಪನ್ (ಕಾರ್ಯಕಾರಿ ಅಧ್ಯಕ್ಷ - ಕಮಾನಿ ವರ್ಕರ್ಸ್ ಯೂನಿಯನ್), ಆನಂದ್ ಪಟವರ್ಧನ್ (ಚಲನಚಿತ್ರ ನಿರ್ದೇಶಕ, ನಿರ್ಮಾಪಕ), ವಂದನಶಿವ (ಪರಿಸರ ವಿಜ್ಞಾನಿ), ಬಿಷಪ್ ಎ. ಜಾರ್ಜ್ ನಿನಾನ್ (ಅಧ್ಯಕ್ಷರು - ಇನ್ಸಾಫ್), ಅಶೋಕ್ ಚೌಧರಿ (ವಿಕಲ್ಪ ಶಹರನ್‌ಪುರ್), ರೂತ್

ಮನೋರಮ (ನ್ಯಾಶನಲ್ ಅಲೈಯನ್ಸ್ ಫಾರ್ ವಿಮೆನ್), ರಾಮ್‌ಧಯಾಲ್ ಮುಂಡಾ (ನಿವೃತ್ತ ಉಪಕುಲಪತಿಗಳು, ರಾಂಚಿ ವಿಶ್ವವಿದ್ಯಾಲಯ), ಚಿತ್ತರಂಜನ್ ಸಿಂಘ್(ಉಪಾಧ್ಯಕ್ಷರು, ಯು.ಪಿ. - ಪಿ.ಯು.ಸಿ.ಎಲ್.), ಎನ್. ಪಿ. ಸಾಮಿ (ನ್ಯಾಶನಲ್ ಫೆಡರೇಷನ್ ಆಫ್ ಕನ್‌ಸ್ಟ್ರಕ್ಷನ್ ಲೇಬರ್ ಅಂಡ್ ಸೆಕ್ರೆಟರಿ ಕೋ ಆರ್ಡಿನೇಷನ್, ನ್ಯಾಶನಲ್ ಸೆಂಟರ್ ಫಾರ್ ಲೇಬರ್), ನಿಖಿಲ್ ವಾಗ್ಲೆ (ಸಂಪಾದಕರು - ಮಹಾನಗರ ಪತ್ರಿಕೆ), ವಿನೀತ್ ನರೇನ್ (ಸಂಪಾದಕರು, ಕಾಲಚಕ್ರ), ಶಶಿ ಸೇಲ್ (ಅಧ್ಯಕ್ಷರು, ಛತ್ತೀಸ್‌ಘರ್ ಮಹಿಳಾ ಜಾಗೃತಿ ಸಂಘಟನ), ಪಿ. ವಿ. ರಾಜಗೋಪಾಲ್ (ಏಕ್ತಾ ಪರಿಷದ್), ರಾಜೇಂದ್ರ ಕೆ. ಸೇಠ್ (ಸಂಘಟನಾ ಕಾರ್ಯದರ್ಶಿ, ನ್ಯಾಶನಲ್ ಪಿ.ಯು.ಸಿಲ್)

ಸಹಾಯ ಧನವನ್ನು ಡಿ.ಡಿ/ಚೆಕ್/ಎಂ.ಓ. ಮೂಲಕ The Chattisgarh Institute of Law at Durg, Madhya Pradesh ಹೆಸರಿನಲ್ಲಿ ಈ ವಿಳಾಸಕ್ಕೆ ಕಳುಹಿಸಿ -

C/o. Adv. Gautam Bandopadhyay
Chattisgarh Institute of Law
H. No. 1192, Sector - 1, P.O. Shanker Nagar, Raipur, Madya Pradesh - 492 007

## "ಸರ್ವೋಚ್ಚ ನ್ಯಾಯಾಲಯದ ತೀರ್ಪು"

ಫೆಬ್ರುವರಿ 19, 1981ರಂದು ಪ್ರತಿಭಾಳನ್ನು ರವಿಕುಮಾರ್‌ರೊಂದಿಗೆ ವಿವಾಹ ಮಾಡಲಾಯಿತು. ರವಿಕುಮಾರ್ ತಂದೆ ವ್ಯಾಪಾರಸ್ಥನಾಗಿದ್ದು ಪ್ರತಿಭಾಳ ತಂದೆ-ತಾಯಿಗಿಂತ ಆರ್ಥಿಕವಾಗಿ ಉನ್ನತ ಸ್ಥಿತಿಯಲ್ಲಿದ್ದರು. ಮದುವೆಯಾದ ನಂತರ ಪ್ರತಿಭಾಳನ್ನು ದೈಹಿಕವಾಗಿ ಹಾಗೂ ಮಾನಸಿಕವಾಗಿ ಅವಳ ಅತ್ತೆ ಮಾವಂದಿರು, ಗಂಡ ಹಿಂಸಿಸತೊಡಗಿದರು. ಪ್ರತಿಭಾ ಗಂಡು ಮಗುವಿಗೆ ಜನ್ಮ ನೀಡಿದ ಮೇಲೂ ಕಿರುಕುಳ ಮುಂದುವರಿಯುತ್ತಾ ಹೋಯಿತು. ಅವಳ ತಂದೆ ತಾಯಿಯರನ್ನು ಅವಮಾನ ಮಾಡುವುದು, ಕಡಿಮೆ ವರದಕ್ಷಿಣೆಗಾಗಿ ಹಿಂಸಿಸುವುದು ಮುಂದುವರಿಯಿತು.

ಜೂನ್ 8, 1982ರಂದು ಪ್ರತಿಭಾ ಶೇ. 100ರಷ್ಟು ಸುಟ್ಟು ಗಾಯಗಳಿಂದ ಗಂಡನ ಮನೆಯಲ್ಲಿ ಮೃತಳಾದಳು. ಈ ಸಾವನ್ನು ಆಕಸ್ಮಿಕ ಸಾವೆಂದು ದಾಖಲಿಸಲಾಯಿತು. ಅವಳ ದೇಹ ಅಡಿಗೆ ಮನೆಯಲ್ಲಿ ಇತ್ತು. ಸಾವು ಸಾಯಂಕಾಲ 4ರಿಂದ 6 ಗಂಟೆಯ ಒಳಗೆ ಸಂಭವಿಸಿತ್ತು.

ಟ್ರಯಲ್ ಕೋರ್ಟಿನಲ್ಲಿ ಪ್ರತಿಭಾಳ ಗಂಡ, ಅತ್ತೆ-ಮಾವ ಕೊಲೆ ಮಾಡಿದ ಅಪರಾಧಿಗಳೆಂದು ತೀರ್ಪು ನೀಡಿ ಜೀವಾವಧಿ ಶಿಕ್ಷೆಯನ್ನು ನೀಡಲಾಯಿತು. ಪಂಜಾಬ್ ಮತ್ತು ಹರ್‍ಯಾಣ ಡಿವಿಜನ್ ಬೆಂಚ್ ಸಹ ಈ ಶಿಕ್ಷೆಯನ್ನು ಪುನಃ ದೃಢೀಕರಿಸಿತು. 1993ರಲ್ಲಿ ಪ್ರತಿಭಾಳ ಮಾವ ತೀರಿಕೊಂಡರು.

ಸರ್ವೋಚ್ಚ ನ್ಯಾಯಾಲಯ ಪ್ರತಿಭಾಳಿಗೆ ನೀಡಲಾದ ಕ್ರೂರವಾದ ಹಿಂಸೆಯನ್ನು ಅವಳ ತಂದೆ ಹಾಗೂ ಚಿಕ್ಕಮ್ಮ ನೀಡಿದ ಸಾಕ್ಷಿಯಿಂದ ಎತ್ತಿ ಹಿಡಿಯಿತು. ಕೇವಲ ಆರು ತಿಂಗಳ ಮಗುವನ್ನು ಅತ್ತೆ ಮಾವಂದಿರ ಬಳಿ ಬಿಟ್ಟು ಪ್ರತಿಭ ಆತ್ಮಹತ್ಯೆ ಮಾಡಿಕೊಳ್ಳಲು ಸಾಧ್ಯವಿಲ್ಲವೆಂದು ಭಾವಿಸಿತು.

ಮರಣೋತ್ತರ ಪರೀಕ್ಷೆಯಿಂದ ಪ್ರತಿಭಾಳ ಬಟ್ಟೆಗಳು ಸೀಮೆಎಣ್ಣೆಯಲ್ಲಿ ಅದ್ದಿರುವುದು ಸ್ಪಷ್ಟವಾಗಿ ತಿಳಿದುಬಂದಿದೆ. ಅವಳ ದವಡೆಯ ಮಧ್ಯದಲ್ಲಿ ಸಹ ಬಿಗಿಯಾಗಿ ಕಚ್ಚಿ ಹಿಡಿದ ಬಟ್ಟೆಯ ಚೂರು ಕಂಡುಬಂದಿದೆ. ಅತ್ತೆ ಕಣ್ಣಿನ ಶಸ್ತ್ರ ಚಿಕಿತ್ಸೆಗಾಗಿ ಸಂಬಂಧಿಕರ ಮನೆಗೆ ಹೋಗಿದ್ದ ಕಾರಣ ಆಕೆಯನ್ನು ಶಿಕ್ಷೆಯಿಂದ ಮುಕ್ತಗೊಳಿಸಲಾಗಿದೆ. ಗಂಡ 4ರಿಂದ 6 ಗಂಟೆಯವರೆಗೆ ವ್ಯಾಪಾರಕ್ಕೆ ಹೋಗಿದ್ದನು ಎಂಬುದನ್ನು ಸರ್ವೋಚ್ಚ ನ್ಯಾಯಾಲಯ ಒಪ್ಪಲಿಲ್ಲ.

ಹಿಂದೆ ನೀಡಲಾದ ತೀರ್ಪುಗಳನ್ನು ಸರ್ವೋಚ್ಚ ನ್ಯಾಯಾಲಯ ಎತ್ತಿ ಹಿಡಿದುದಲ್ಲದೆ, ಅವರಿಗೆ ನೀಡಲಾದ ಜಾಮೀನು ಬಾಂಡುಗಳನ್ನು ಹಿಂತಿರುಗಿಸುವಂತೆ ನಿರ್ದೇಶಿಸಿದ್ದಲ್ಲದೆ, ಜೀವಾವಧಿ ಶಿಕ್ಷೆಯನ್ನು ಅನುಭವಿಸಬೇಕೆಂದು ತೀರ್ಪು ನೀಡಿದೆ.

# ವಿಚ್ಛೇದನ ಬೇಕೆ? ಹೆಂಡತಿ ಹುಚ್ಚಿ ಎಂಬ ಪ್ರಮಾಣ ಪತ್ರ ತನ್ನಿ!

ಹೆಚ್ಚಿನ ವರದಕ್ಷಿಣೆ ತರದ ಹೆಂಡತಿಯನ್ನು ಸುಲಭವಾಗಿ ಹೊರದೂಡಬೇಕೆ? ಹುಚ್ಚಿ ಎಂದು ಕರೆದು ತಲೆ ಸರಿಯಿಲ್ಲವೆಂದು ಪ್ರಮಾಣ ಪತ್ರ ತನ್ನಿ. ಸಾರಾಗವಾಗಿ ವಿಚ್ಛೇಧನ ಪಡೆದು ಮತ್ತೊಮ್ಮೆ ವರದಕ್ಷಿಣೆಯ ಮೀನಿಗೆ ಗಾಳ ಹಾಕಬಹುದು. ಇದು ವೈದ್ಯೆಯೊಬ್ಬಳ ಬದುಕಿನಲ್ಲಿ ನಿಜವಾಗಿ ನಡೆದ ಘಟನೆ.

ಡಾ. ಶಶಿಕಲಾ ಮಹಾಲಕ್ಷ್ಮಿ ಲೇಔಟ್‌ನ ನಿವಾಸಿ. ಇಂಜಿನಿಯರ ನೊಬ್ಬನೊಂದಿಗೆ 5,0000/-ರೂ. ವರದಕ್ಷಿಣೆ, ಸಾಕಷ್ಟು ಚಿನ್ನ, ಬೆಳ್ಳಿ ಜೊತೆಗೆ 10 ವರ್ಷಗಳ ಹಿಂದೆ ಮದುವೆಯಾಯಿತು. ಮದುವೆಯಿಂದ ಆಕೆಗೆ ಸಿಕ್ಕ ಲಾಭವೆಂದರೆ ಒಬ್ಬ ಮಗ, 10 ವರ್ಷದ ನೋವು. ಮಗು ಹುಟ್ಟಿದ ಮೇಲೆ ಸಾಮಾನ್ಯವಾಗಿ ಕಾಣಿಸಿಕೊಳ್ಳುವ ಉದಾಸೀನತೆಯನ್ನೆ ಹುಚ್ಚೆಂದು ಪರಿಗಣಿಸಿದ ಗಂಡ ಆಕೆಯನ್ನು NIMHANSಗೂ ಕರೆದುಕೊಂಡು ಹೋದ ಅಲ್ಲದೆ ಹುಚ್ಚಿ ಎಂಬ ಪ್ರಮಾಣ ಪತ್ರ ಪಡೆಯಲು ಸರ್ವ ಪ್ರಯತ್ನವನ್ನು ಮಾಡಿದ. ಪ್ರಮಾಣ ಪತ್ರ ದೊರಕದೆ ಇದ್ದುದು ನನ್ನ ಪುಣ್ಯ, ಇಲ್ಲದಿದ್ದರೆ ಹುಚ್ಚೀ ಎಂಬ ಕಾರಣಕ್ಕೆ ಯಾವ ನ್ಯಾಯಾಲಯವು ಮಗುವನ್ನು ನನಗೆ ನೀಡುತ್ತಿರಲಿಲ್ಲ ಎಂದು ಭಾವುಕರಾಗುತ್ತಾರೆ ಶಶಿಕಲಾ.

ಮಗುವಿನ ಜನನದ ನಂತರ ಉಂಟಾಗುವ ಉದಾಸೀನತೆಯಿಂದ ಬಳಲುತ್ತಿರುವಾಗ ಗಂಡನ ಸಂಬಂಧಿಯೊಬ್ಬನನ್ನು ಲಂಡನ್ನಿನಿಂದ ಕರೆಸಿ ಮತ್ತು ಬರಿಸುವ ಇಂಜೆಕ್ಷನ್‌ಗಳನ್ನು ಕೊಡಿಸಲಾಯ್ತು. ಆ ಸಂದರ್ಭದಲ್ಲಿ ಗಂಡ ಮತ್ತು ಮನೆ ಯವರೆಲ್ಲರೂ ಸೇರಿ ನನ್ನನ್ನು ಹುಚ್ಚಿ ಎಂದು ಕರೆದರು ಎಂದು ಶಶಿಕಲಾ ಹೇಳಿದ್ದಾರೆ. ಇಷ್ಟೆಲ್ಲ ಮಾಡಲು ಆಕೆ ಮಾಡಿದ ತಪ್ಪೆಂದರೆ ಸಾಕಾಗುವಷ್ಟು ವರದಕ್ಷಿಣೆ ತರಲಿಲ್ಲವೆಂಬುದು. ಆ ಕಾರಣಕ್ಕಾಗಿ ಕಿರುಕುಳ ನೀಡುತ್ತಿದ್ದರು. ಆಕೆ ತುಂಬಿದ ಬಸುರಿ ಇದ್ದಾಗಲು ಗಂಡ ಆಕೆಯನ್ನು ಔಷಧಿ, ಮನೆಗೆ ಬೇಕಾಗುವ ಸಾಮಾನುಗಳನ್ನು ತರಿಸುತ್ತಿದ್ದ. ಒಮ್ಮೆ ತಲೆನೋವಿನ ಮಾತ್ರೆಯನ್ನು ಮೆಜೆಸ್ಟಿಕ್‌ಗೆ ಹೋಗಿ ತರಲು ಹೇಳಿದ. ಆಟೋದಲ್ಲಿ ಹೋಗಿ ಬಿಡುವಳೆಂದು ಬಸ್‌ಚಾರ್ಜ್‌ಗಾಗುವಷ್ಟು ಹಣವನ್ನು ಮಾತ್ರ ಕೊಟ್ಟಿದ್ದ. ಉರಿ ಬಿಸಿಲಿನಲ್ಲಿ ಬಸ್ ಬದಲಾಯಿಸಿಕೊಂಡು ಹೋಗಿ ಔಷಧಿಯನ್ನು ತಂದುಕೊಟ್ಟಾಗ ಆತ ಕೇಳಿದ್ದು ಉಳಿದ 1 ರೂ. 40 ಪೈ. ಎಲ್ಲಿ ಎಂದು.

ಮತ್ತೊಂದು ದಿನ ಪರೀಕ್ಷಿಸಿಕೊಳ್ಳಲು ವೈದ್ಯರ ಬಳಿ ಹೋದಾಗ ಡಾಕ್ಟರರಿಗೆ ಕೊಡಬೇಕಾದ ಹಣ ಕಡಿಮೆ ಇತ್ತು. ಉಳಿದ ಹಣವನ್ನು ನಿನ್ನ ತಾಯಿ ಮನೆಯಿಂದಲೇ ತಂದುಕೊಡು ಎಂದು ಆಸ್ಪತ್ರೆಯಲ್ಲಿ ಎಲ್ಲರೆದುರೆ ಕೂಗಾಡಿದ. ಎಂಥ ಅವಮಾನವಾಗಿರಬಹುದೆಂದು ಊಹಿಸಿಕೊಳ್ಳಬಹುದು ಎನ್ನುತ್ತಾರೆ ಶಶಿಕಲಾ. ಆಕೆಗಾಗಿ ಒಂದು ಐರನ್ ಮಾತ್ರೆಯನ್ನು ತಂದುಕೊಡಲಿಲ್ಲ. ಮನೆಯೊಳಗೆ ಬಟ್ಟೆ ಬದಲಾಯಿಸುವ ಜಾಗದಲ್ಲಿ ಬೇರೆಯಾಗಿ ನನ್ನ ಅಡುಗೆ ನಾನೇ ಮಾಡಿಕೊಳ್ಳಬೇಕಾಗಿತ್ತು. ಎಷ್ಟೋ ಸಮಯ ಅಡುಗೆಗೆ ಸಾಮಾನಿಲ್ಲದಿದ್ದಾಗಲೂ ಯಾರೂ ವಿಚಾರಿಸಿ ಕೊಳ್ಳುತ್ತಿರಲಿಲ್ಲ. ಜೊತೆಗೆ ಮೈದುನನೊಂದಿಗೆ ಸಂಬಂಧವಿದೆಯೆಂದು ಸಂಶಯಿಸುತ್ತಿದ್ದರು - ಎಂದು ತಮ್ಮ ನೋವಿನ ದಿನಗಳನ್ನು ಶಶಿಕಲ ನೆನಪಿಸಿ ಕೊಳ್ಳುತ್ತಾರೆ. ಈ ಎಲ್ಲಾ ಹಿಂಸೆಯಿಂದ ರೋಸಿ ಹೋಗಿದ್ದ ಶಶಿಕಲಾ ಹುಚ್ಚಿ ಎಂದು ದೃಢಪಡಿಸಲು ಗಂಡ ಪ್ರಯತ್ನಿಸಿದಾಗ, ಯಾವುದೇ ವೈದ್ಯಕೀಯ ಪರೀಕ್ಷೆಗೊಳಗಾಗುವುದಿಲ್ಲವೆಂದು ತೀರ್ಮಾನಿಸಿ ಕೊಂಡ ಅವರು ವಿಚ್ಛೇದನಕ್ಕಾಗಿ ಕೋರ್ಟಿಗೆ ಹೋದರು. ಫ್ಯಾಮಿಲಿ ಕೋರ್ಟಿನಲ್ಲಿ ಗಂಡನ ಬಳಿಗೆ ಹಿಂತಿರುಗಲು ತೀರ್ಪು ನೀಡಿದಾಗ ನಿಜಕ್ಕು ಆಕೆಗೆ ಅಘಾತವಾಯಿತು. ಮತ್ತೆ ಹೈಕೋರ್ಟಿಗೆ ಮೊರೆಹೋದಾಗ ಆಕೆಯ ಪರವಾಗಿ ತೀರ್ಪು ಸಿಕ್ಕಿ 10 ವರ್ಷಗಳ ಗೋಳಿನ ದಾಂಪತ್ಯದಿಂದ ಬಿಡುಗಡೆ ದೊರೆಯಿತು.

ಈ ಘಟನೆಗೆ ಸಂಬಂಧಿಸಿದಂತೆ ಮಾನಿನಿ ಮಹಿಳಾ ಸಂಘಟನೆಯವರು ಶಶಿಕಲಾ ಅವರಿಗೆ ಸಹಕಾರ ನೀಡಿದ್ದಾರೆ. ಮಾನಿನಿ ಸಂಘಟನೆಯ ಶ್ರೀಮತಿ ಮೀರಾ ಚಕ್ರವರ್ತಿಯವರು, ರಾಜ್ಯ ಮಹಿಳಾ ಆಯೋಗದ ಸದಸ್ಯೆಯೂ ಆಗಿದ್ದಾರೆ. ಆಯೋಗದ ಮೂಲಕ ಮಾತನಾಡುತ್ತಾ ಮೀರಾ ಅವರು ಇತ್ತೀಚೆಗೆ ನಗರದಲ್ಲಿ ಹುಚ್ಚಿನ ಆಧಾರದ ಮೇಲೆ ಪಡೆದುಕೊಳ್ಳುವ ವಿಚ್ಛೇಧನದ ಸಂಖ್ಯೆ ದಿಢೀರನೆ ಏರಿದೆ. ಕಳೆದ ಒಂದು ವರ್ಷದಲ್ಲಿ ಕೌಟುಂಬಿಕ ನ್ಯಾಯಾಲಯದಲ್ಲಿ ಆ ರೀತಿಯ ಹತ್ತು ಕೇಸುಗಳು ದಾಖಲಾಗಿವೆ ಎಂದು ಹೇಳಿದ್ದಾರೆ.

ಕೌಟುಂಬಿಕ ನ್ಯಾಯಾಲಯದ ವಕೀಲರಾದ ಶ್ರೀಮತಿ ಹೇಮಲತ ಮಹಿಷಿಯವರೂ ಸಹ ನನ್ನ ಬಳಿ ಬರುವ ಕೇಸುಗಳಲ್ಲಿ ಗಂಡಂದಿರು ಹೆಂಡತಿಯ ಮಾನಸಿಕ ಸ್ಥಿತಿ ಸರಿಯಿಲ್ಲವೆಂದು ದೃಢಪಡಿಸಲು ನಡೆಸದೆ ಇರುವ ಪ್ರಯತ್ನಗಳೇ ಇಲ್ಲ. ವೈವಾಹಿಕ ಜೀವನ ಸರಿಯಿಲ್ಲದಿದ್ದರೆ ಹೆಂಗಸರು ಖಿನ್ನತೆ ಅನುಭವಿಸುವುದು ಸಹಜ. ಅದನ್ನು ಬಹಳ ಸುಲಭವಾಗಿ ಹುಚ್ಚೆಂದು ದೃಢಪಡಿಸಿ ವಿಚ್ಛೇಧನಕ್ಕೆ ಹಾಕಿಕೊಳ್ಳುತ್ತಾರೆ ಎಂದು ಹೇಳಿದ್ದಾರೆ.

ನಿಮಾನ್ಸ್‌ನ ಡಾ. ವೈಜಯಂತಿಯವರು ತಮ್ಮ ಬಳಿಗೆ ಮಾನಸಿಕ ರೋಗಿ ಎಂದು ಕರೆದುಕೊಂಡು ಬಂದವರ ಬಗ್ಗೆ ಹೇಳಿದ್ದಾರೆ. ಆಕೆ ಮಾನಸಿಕವಾಗಿ ಆರೋಗ್ಯವಾಗಿದ್ದಳು, ಆಕೆಯ ಮಾತುಗಳು ಸಮರ್ಪಕ ವಾಗಿದ್ದವು ಆದರೂ ಆಕೆಯನ್ನು ಹುಚ್ಚಿ ಎಂದು ಕರೆದುಕೊಂಡು ಬಂದಿದ್ದರು ಎನ್ನುತ್ತಾರೆ.

ವಿಮೋಚನ ಮಹಿಳಾ ಸಂಘಟನೆಯ ಡೋನಾರವರು ತಾವು ಇತ್ತೀಚೆಗೆ ತೆಗೆದುಕೊಂಡಿರುವ ಪ್ರಕರಣದಲ್ಲಿ ಗಣ್ಯ, ಗೌರವಾನ್ವಿತ ಪತಿಯೊಬ್ಬ ತನ್ನ ಹೆಂಡತಿ ಮಾನಸಿಕವಾಗಿ ಅಸ್ವಸ್ಥರು ಎಂಬುದಕ್ಕೆ ಆಕೆಯನ್ನು ನಿಮಾನ್ಸ್‌ಗೆ ಸೇರಿಸಿದ್ದರ ಬಗ್ಗೆ ಹೇಳಿದರು.

*ಕೃಪೆ : ಟೈಮ್ಸ್ ಆಫ್ ಇಂಡಿಯಾ*

ಮಾನಸ ಪತ್ರಿಕೆ ಯಾವ ಸಂಸ್ಥೆಯ, ಸರ್ಕಾರದ ನೆರವಿಲ್ಲದೇ ಪ್ರಕಟವಾಗುತ್ತಿರುವ ಮಹಿಳೆಯರೇ ನಡೆಸುತ್ತಿರುವ ಸ್ವಾಯತ್ತ ಪತ್ರಿಕೆ. ಓದುಗರು ಹಾಗೂ ಸಹೃದಯರು ನೀಡುವ ಆರ್ಥಿಕ ನೆರವೇ ಪತ್ರಿಕೆಯ ಜೀವಾಳ. ಚಂದಾದಾರರಿಗೆ ಚಂದಾ ಅವಧಿ ಮುಕ್ತಾಯವಾದುದರ ಬಗ್ಗೆ ಸೂಚನೆಯನ್ನು ನೀಡಲಾಗುತ್ತದೆ. ಓದುಗರು ತಕ್ಷಣ ಚಂದಾ ನವೀಕರಿಸಬೇಕೆಂದು ಕೋರುತ್ತೇವೆ. ಪತ್ರಿಕೆಯು ಉಳಿದು ಬೆಳೆಯಬೇಕಾದರೆ ಓದುಗರ ಸಹಕಾರ ಅತ್ಯಗತ್ಯ.

**ವಾರ್ಷಿಕ ಚಂದಾ : 40 ರೂ.**

**ಸಂಸ್ಥೆಗಳಿಗೆ : 75 ರೂ.**

*ಸಂ. ಮಂಡಳಿ*

REGD NO. KRNA 271

BOOK-POST
PRINTED MATTER

ವಿಳಾಸ :
ಮಾನಸ
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು - 560 067